ಶ್ರೀ- ಜೀವನ. ಬಂ

ಜೀವ

# ಐತಿಹಾಸಿಕ ಕಥೆಗಳು.





## ರಣಜಿತಸಿಂಗ !

ಪಂಜಾಬದೊಳಗಿನ ಗುಜರನವಾಲಾ ಎಂಬ ಚಿಕ್ಕ ಸಂಸ್ಥಾನದ ಒಡೆಯನಾದ ಮಹನಸಿಂಗನೆಂಬವನ ಮಗನೇ ರಣಜಿತಸಿಂಗನು. ಇವನಿಗೆ ಚಿಕ್ಕವನಿದ್ದಾಗ ಮೈಲಿ ಬೇನೆ ಬಂದುದರ ಪರಿಣಾಮವಾಗಿ ಒಂದು ಕಣ್ಣು ಹೋಗಿತ್ತು. ಈತನು ಪಟ್ಟಕ್ಕೆ ಬಂದಾಗ ಹದಿನಾರು ವರ್ಷದವನಿದ್ದನು

ಇವನಿಗೆ ಬಾಲ್ಯದಲ್ಲಿ ಯಾವುದೇ ಶಿಕ್ಷಣವು ಉತ್ತಮ ರೀತಿಯಲ್ಲಿ ನಡೆಯಲಿಲ್ಲ. ತನ್ನ ಸಹಿ ಮಾಡಲು ಕೂಡ ಇವನಿಗೆ ಬರುತ್ತಿರಲಿಲ್ಲ. ಆದರೆ ಚಿಕ್ಕಂದಿನಿಂದಲೇ ತನ್ನ ತಂದೆಯೊಂದಿಗೆ ಅನೇಕ ಯುದ್ಧಗಳಿಗೆ ಹೋಗಿಬಂದಿದ್ದನು. ಗುರಿಯಿಟ್ಟು ಗುಂಡು ಹಾರಿಸುವದು, ಕತ್ತಿ ತಿರುಗಿಸುವದು ಇವೇ ಇವನ ಬಾಲ್ಯದ ಆಟಗಳಾಗಿದ್ದವು. ಆ ಆಟಗಳೇ ಮುಂದೆ ಅವನ ಜೀವನದಲ್ಲಿ ಸಹಾಯಕವಾದವು.

ರಣಜಿತಸಿಂಗನು ಪಟ್ಟಕ್ಕೆ ಬಂದಾಗ ಪಂಜಾಬದೊಳಗೆ ಅನೇಕ ಚಿಕ್ಕ ಚಿಕ್ಕ ರಾಜ್ಯಗಳಿದ್ದವು. ಅವುಗಳನ್ನೆಲ್ಲ ಕೂಡಿಸಿ ಶೀಖರ ಒಂದೇ ರಾಜ್ಯವನ್ನು ಮಾಡಬೇಕೆಂಬ ಹಂಬಲ ಅವನಿಗಿದ್ದಿತು. ಮುಂದೆ ಕೆಲ ದಿನಗಳ ನಂತರ ಕಾಬೂಲದ ಅರಸನು ಪಂಜಾಬದ ಮೇಲೆ ದಾಳಿ ಮಾಡಿದಾಗ ರಣಜಿತಸಿಂಗನು ಅವನಿಗೆ ಸಹಾಯ ಮಾಡಿದನು. ಅದರ ದ್ಯೋತಕವಾಗಿ ಆ ಖಾನನು ತನ್ನ ವತಿಯಿಂದ ರಣಜಿತಸಿಂಗನನ್ನು ಲಾಹೋರದ ಸುಬೇದಾರನನ್ನಾಗಿ ಇರಿಸಿಹೋದನು. ಇದು ಅವನ ಪ್ರಗತಿಯ ಮೊದಲನೆಯ ಮೆಟ್ಟಲಾಯಿತೆಂದೇ ಹೇಳಬೇಕು.

ಈ ರೀತಿಯಾಗಿ ಸುಬೇದಾರನಾಗಿದ್ದ ಅವನು ಚಿಕ್ಕಪುಟ್ಟ ಶೀಖರ ರಾಜ್ಯಗಳನ್ನೆಲ್ಲ ಒಂದುಗೂಡಿಸಿ ಅವರೆಲ್ಲರಿಗೆ ತಾನೇ ಮುಂದಾಳುವಾದನು. ವಿದೇಶಿಯರು ಅನುಸರಿಸುವ ಪದ್ಧತಿಯನ್ನೇ ತಾನು ತನ್ನ ಸೈನ್ಯದಲ್ಲಿ ಅನುಸರಿಸಿದನು. ತೋಫುಗಳ ಬಗೆಗೂ ಅವನು ಸಾಕಷ್ಟು ಪರಿಶ್ರಮ ಪಟ್ಟನು ಇವನ ಪರಾಕ್ರಮವನ್ನು ಕಂಡ ಬ್ರಿಟಿಶರು ಇವನೊಂದಿಗೆ ಮಿತ್ರತ್ವದಿಂದಿರಲು ಒಪ್ಪಂದ ಮಾಡಿಕೊಂಡರು. ಅದರ ದ್ಯೋತಕವಾಗಿ ಇವನಿಗೆ ಇಂಗ್ಲಂಡದಿಂದ ಕುದುರೆಗಳು ಕಾಣಿಕೆಯಾಗಿ ದೊರೆತವು.

ಕಾಶ್ಮೀರ, ಪೇಶಾವರಗಳನ್ನು ಕೂಡ ರಣಜಿತಸಿಂಗನು ಕೈವಶ ಮಾಡಿಕೊಂಡನು ಪರಾಕ್ರಮಿಯೂ, ಧೈರ್ಯಶಾಲಿಯೂ ಆದ ಇವನು ಅತ್ಯಂತ ಉದಾರ ಮನಸ್ಸಿನವನಾಗಿದ್ದನೆಂದೇ ಇವನ ಸರ್ವಾಧಿಕಾರೀ ಆಡ ಳಿತವು ಯಾರಿಗೂ ಬೇಸರವನ್ನುಂಟುಮಾಡಲಿಲ್ಲ. ಭಾರತದ ವೀರರ ಇತಿಹಾಸದಲ್ಲಿ ರಣಜಿತಸಿಂಗನಿಗೂ ಅಗ್ರಸ್ಥಾನವಿದೆ.



# ವಿದ್ಯಾರಣ್ಯರು !

ದಕ್ಷಿಣ ಭಾರತದ ಇತಿಹಾಸದೊಳಗೆ ಹದಿಮೂರನೆಯ ಶತಮಾನವು ತೀರ ಅಶುಭವೆಂದು ಪರಿಗಣಿಸಲಾಗುತ್ತಿದೆ. ಆ ಸಮಯದಲ್ಲಿ ಇಲ್ಲಿಯ ಚಿಕ್ಕ ಚಿಕ್ಕ ರಾಜ್ಯಗಳನ್ನು ಅಂದರೆ, ದ್ವಾರ ಸಮುದ್ರದೊಳಗಿನ ಹೊಯ್ಸ ಳರ ರಾಜ್ಯ, ದೇವಗಿರಿಯೊಳಗಿನ ಯಾದವರ ರಾಜ್ಯ, ವಶಂಗಲ್ಲಿನೊಳಗಿನ ಕಾಕತೀಯ ರಾಜ್ಯಗಳೇ ಮುಂತಾದ ರಾಜ್ಯಗಳು ಮುಸಲ್ಮಾನರ ಹಾವ ಳಿಗೆ ತುತ್ತಾಗಿ ತಲೆ ಎತ್ತಲು ಕೂಡ ಬಾರದಂತೆ ಜೀರ್ಣ ಸ್ಥಿತಿಗೆ ಬಂದಿದ್ದವು.

ಆಗ ದಕ್ಷಿಣದ ಎಲ್ಲೆಡೆಗೂ ಮುಂದೇನು ? ಎಂಬ ಸಮಸ್ಯೆಯೇ ಇದ್ದಿತು. ಅಂಥ ಸಮಯದಲ್ಲಿ ಪಂಪಾ ಸರೋವರದ ಬಳಿ ವಾಸವಾಗಿದ್ದ

ಮಾಯಣಭಟ್ಟ—ಶ್ರೀಮತಿದೇವಿ ಎಂಬ ದಂಪತಿಗಳ ಉದರದಲ್ಲಿ ಮಹಾ ಮಹಿಮರಾದ ವಿದ್ಯಾರಣ್ಯರು ಜನಿಸಿದರು. ಅವರ ಮೊದಲಿನ ಹೆಸರು ಮಾಧವ ಎಂಬುದಾಗಿತ್ತು. ಮಾಧವರಿಗೆ ಇನ್ನಿಬ್ಬರು ಸೋದರರೂ ಇದ್ದು ಅವರ ಹೆಸರುಗಳು ಸಾಯಣ ಹಾಗೂ ಭೋಗನಾಥ ಎಂದು ಇವೆ.

ಮಾಧವರ ಅಭ್ಯಾಸವು ಮೊದಲು ತಮ್ಮ ತಂದೆಯವರ ಬಳಿಯೇ ಆಯಿತು. ಹೆಚ್ಚಿನ ಸಂಸ್ಕೃತ ಅಧ್ಯಯನಕ್ಕಾಗಿ ಅವರು ತಮ್ಮ ಸೋದರ ಸಾಯಣನೊಂದಿಗೆ ಕಾಂಚಿಗೆ ಹೋಗಿ ಅಲ್ಲಿಯ ಶ್ರೀ ವಿದ್ಯಾತೀರ್ಥ ಎಂಬ ವರಲ್ಲಿ ಶಾಸ್ತ್ರಗಳ ಅಭ್ಯಾಸವನ್ನು ಕಲಿತು ಅಲ್ಲಿಂದ ಮರಳಿದರು. ಬಂದ ನಂತರ ಅವರು ಎಲ್ಲಕ್ಕೂ ಮೊದಲು ಹಂಪಿಯಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತವನ್ನು ಕಲಿಸಲಾರಂಭಿಸಿದರು, ಅಂದಿನಿಂದ ಅವರಿಗೆ ಮಾಧ ವಾಚಾರ್ಯರೆಂದು ಕರೆಯತೊಡಗಿದರು.

ಆ ಸಮಯದಲ್ಲಿ ಕರ್ನಾಟಕದೊಳಗೆ ಮುಸಲ್ಮಾನರ ಪುಂಡಾಟಿ ಕೆಯು ಮಿತಿಮೀರಿ ಹೋಗಿತ್ತು. ಉತ್ತರದಿಂದ ಅಗಣಿತ ಸೈನ್ಯದೊಂದಿಗೆ ಬಂದು ತಮ್ಮಿಷ್ಟಕ್ಕೆ ತಾವು ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದ ಚಿಕ್ಕ ಚಿಕ್ಕ ರಾಜ್ಯಗಳ ಮೇಲೆ ಯುದ್ಧಸಾರಿ ಅವುಗಳ ಹುಟ್ಟನ್ನಡಗಿಸಿ ಬಿಡುತ್ತಿದ್ದರು. ದಕ್ಷಿಣದಲ್ಲಿ ಎತ್ತ ನೋಡಿದತ್ತ ಹಾಳಾದ ನಗರಗಳೇ ಕಾಣುವಂಥ ಪ್ರಸಂಗ ಬಂದಿತ್ತು.

ದೇಶಕ್ಕೆ ಬಂದಂಥ ವಿಪತ್ತನ್ನು ಗಮನಿಸಿ ಮಾಧವಾಚಾರ್ಯರಿಗೆ ಕಡುದುಃಖವೆನಿಸಿತು. ಜ್ಞಾನಿಗಳಾದ ಅವರು ಈ ಸಂಕಟವನ್ನು ಹೇಗೆ ಪರಿಹರಿಸಬೇಕೆಂಬ ಯೋಚನೆಗಳಲ್ಲಿಯೇ ದಿನಗಳನ್ನು ಮುಂದೂಡತೊಡ ಗಿದರು ಮುಂದೆ ಅವರು ಉಗ್ರ ತಪಸ್ಸು ಮಾಡಿ ದೇವಿಯನ್ನು ಒಲಿಸಿ ಕೊಂಡರು ಅಲ್ಲದೆ ದೇವಿಯು ಕೂಡ "ನಿನ್ನ ಕಾರ್ಯವು ಕೈಗೂಡು ವದು" ಎಂದು ಹರಿಸಿದಳು.

ದೇವಿಯ ವರದಿಂದ ಉತ್ತೇಜಿತರಾದ ಮಾಧವಾಚಾರ್ಯರು ಮಹಾ ಪರಾಕ್ರಮಿಗಳಾದ ಹುಕ್ಕ-ಬುಕ್ಕರೆಂಬ ಸೋದರರನ್ನು ಮುಂದೆ

ಮಾಡಿಕೊಂಡು ಅವರಲ್ಲಿ ಹಿರಿಯನಾದ ಹುಕ್ಕನಿಗೆ ಹರಿಹರನೆಂಬ ನಾಮ ಕರಣ ಮಾಡಿ ಹಂಪೆಯಲ್ಲಿ ಹೊಸ ರಾಜ್ಯವನ್ನು ಸ್ಥಾಪಿಸಿ ಅದರ ಪಟ್ಟ ವನ್ನು ಹರಿಹರನಿಗೆ ಕಟ್ಟಿದರು ಮಾಧವಾಚಾರ್ಯರು ಮಂತ್ರಿಗಳಾದರು. ಈ ಸಮಯದಲ್ಲಿ ಶೃಂಗೇರಿಯ ಪೀಠದಿಂದ ಧನಸಹಾಯವೂ ದೊರೆಯಿ ತೆಂದು ಹೇಳಲಾಗುತ್ತಿದೆ.

ವಿಜಯನಗರ ಸಾಮ್ರಾಜ್ಯದ ಮಂತ್ರಿಗಳಾಗಿದ್ದ ಮಾಧವಾಚಾ ರ್ಯರು ಆ ಕಾಲದ ಮಹಾ ವಿದ್ವನ್ಮಣಿ ವೇದಾಂತಿಗಳಾಗಿದ್ದರು. ಮುಂದೆ ಶೃಂಗೇರಿಯ ಆಗಿನ ಸ್ವಾಮಿಗಳಾದ ಶ್ರೀ ಭಾರತೀ ತೀರ್ಥರಿಂದ ಸನ್ಯಾಸ ವನ್ನು ಸ್ವೀಕರಿಸಿ ವಿದ್ಯಾರಣ್ಯರೆಂಬ ನಾಮವನ್ನು ಪಡೆದರು. ವಿದ್ಯಾ ರಣ್ಯರು ತಾವು ಬಯಸಿದಂತೆ ಹಿಂದೂ ಧರ್ಮದ ಅವನತಿಯನ್ನು ನಿಲ್ಲಿಸಿ ಕಾಪಾಡಿದರು. ಈ ರೀತಿ ಅವರು ವಿಜಯನಗರ ರಾಜ್ಯಸ್ಥಾಪನೆಗೆ ಕಾರ ಣರಾಗಿ ಅದರ ವೈಭವವನ್ನು ಕಣ್ಣುಟ್ಟನೋಡಿ ಹಂಪಿಯಲ್ಲಿಯೇ ಸಮಾಧಿ ಹೊಂದಿದರು.



## ಕೃಷ್ಣದೇವರಾಯರು !

ಕನ್ನಡ ನಾಡನ್ನು ಊರ್ಜಿತ ಸ್ಥಿತಿಗೆ ತಂದು ಅನೇಕ ಯುದ್ಧಗಳನ್ನು ಗೆದ್ದು ಸುಧಾರಣೆಗೆ ತಂದವರಲ್ಲಿ ವಿಜಯನಗರದ ಕೃಷ್ಣದೇವರಾಯರೇ ಕೊನೆಯವರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಕೃಷ್ಣದೇವರಾಯರಿಗೆ ಚಿಕ್ಕಂದಿನಿಂದಲೂ ಕ್ಷತ್ರಿಯ ವಿದ್ಯೆದತ್ತ ಹೆಚ್ಚಿ ನ ಒಲವು ಇದ್ದ ಕಾರಣ ಅವರು ಕುದುರೆ ಹತ್ತುವ, ಧನುರ್ವಿದ್ಯೆ, ಮಲ್ಲ ವಿದ್ಯೆ ಮುಂತಾದವುಗಳೆಲ್ಲವನ್ನು ಒಳ್ಳೆ ಆಸ್ಥೆಯಿಂದ ಕಲಿತರು. ಇವರು ಚಿಕ್ಕಂದಿನಲ್ಲಿಯೇ ದೊಡ್ಡ ದೊಡ್ಡ ಜಟ್ಟಿಗಳೊಂದಿಗೆ ಕುಸ್ತಿ ಹಿಡಿಯುತ್ತಿದ್ದ ರೆಂದರೆ ಇವರಿಗೆ ಆ ವಿದ್ಯೆಯಲ್ಲಿ ಎಷ್ಟೊಂದು ಆಸಕ್ತಿ ಇದ್ದಿತೆಂಬುದು ಗೊತ್ತಾಗುತ್ತದೆ.

ಕೃಷ್ಣದೇವರಾಯರು ಪಟ್ಟಕ್ಕೆ ಬಂದ ಕೆಲವೇ ದಿವಸಗಳಲ್ಲಿ ಕೊಂಗ ದೇಶದ ಮೇಲೆ ದಂಡೆತ್ತಿ ಹೋಗಿ ವಿಜಯವನ್ನು ದೊರಕಿಸಿದರು. ಅನಂತರ ಓಡಿಸಾದವರೆಗೂ ಹೋಗಿ ಅಲ್ಲಿಯ ಅರಸನನ್ನು ಸೋಲಿಸಿ ಅಲ್ಲಿಯ ವಿಜಯದ ಜ್ಞಾಪಕಾರ್ಥವಾಗಿ ಒಂದು ದಿವ್ಯವಾದ ಸಭಾಮಂದಿರವನ್ನು ಕಟ್ಟಿಸಿದರು. ಅಲ್ಲದೆ ಸಿಲೋನವವರೆಗೂ ದಂಡೆತ್ತಿ ಹೋಗಿ ಅಲ್ಲಿಯ ಚೋಳ, ಚೇರ, ಪಾಂಡ್ಯ ಮುಂತಾದ ಅರಸರನ್ನು ಗೆದ್ದು ಅವರನ್ನು ವಿಜಯನಗರ ಸಿಂಹಾಸನದ ಮಾಂಡಲಿಕರನ್ನಾಗಿ ಮಾಡಿಕೊಂಡರು.

ಅಲ್ಲಿಂದ ಅವರು ಕಲಬುರ್ಗಿಯವರೆಗೂ ಬಂದು ಅಲ್ಲಿಯ ಅರಸನನ್ನು ಸೋಲಿಸಿ ಅದನ್ನು ಕೈವಶ ಮಾಡಿಕೊಂಡು ರಾಜಧಾನಿಯನ್ನು ಪ್ರವೇಶಿಸಿ ತಮ್ಮ ದಕ್ಷಿಣದ ಮಹಾದಂಡಯಾತ್ರೆಯನ್ನು ಮುಗಿಸಿದರು. ಅವರನ್ನು ಎದುರಿಸಬಲ್ಲ ಅರಸರು ಆ ಕಾಲದೊಳಗೆ ಉತ್ತರ ಹಿಂದುಸ್ತಾನದಲ್ಲಿಯೂ ಯಾರೂ ಇರಲಿಲ್ಲ. ಇಂತಹ ಮಹಾಪುರುಷನನ್ನು ಕನ್ನಡತಾಯಿ ಹೆತ್ತಿದ್ದಳು.

ಕೃಷ್ಣದೇವರಾಯರು ಯುದ್ಧದಲ್ಲಿ ವೀರರಿದ್ದಂತೆ ರಾಜಕಾರಣದಲ್ಲಿ ಕುಶಲರೂ ಆಗಿದ್ದರು ಅಲ್ಲದೆ ಹಲವು ಶಾಸ್ತ್ರಗಳಲ್ಲಿ ನಿಷ್ಣಾತರಿದ್ದರು. ಇವರು ತೆಲಗು ಭಾಷೆಯಲ್ಲಿ ಹಲವು ಗ್ರಂಥಗಳನ್ನು ಬರೆದಿರುವರೆಂಬ ಮೇಲೆ ಅನ್ಯ ಭಾಷೆಯ ಬಗ್ಗೆ ಇವರಿಗೆ ಆಸಕ್ತಿ ಎಷ್ಟು ಇದ್ದಿತೆಂಬುದು ವ್ಯಕ್ತವಾಗುತ್ತದೆ. ಇವರ ಕಾಲದಲ್ಲಿ ತೆನ್ನಾಲಿ ರಾಮಕೃಷ್ಣನೆಂಬ ಹಾಸ್ಯಗಾರನೂ ಆಗಿಹೋದನು.

ಹಾಳಾದ ವಿಜಯನಗರದಲ್ಲಿ ಈಗಲೂ ತಲೆಎತ್ತಿನಿಂತಿರುವ ಹಜಾರ ರಾಮನ ಗುಡಿ, ಶ್ರೀ ವಿರುಪಾಕ್ಷದೇವಾಲಯದ ಗೋಪುರ, ಶ್ರೀ ವಿಜಯ ವಿಠ್ಠಲ ದೇವಾಲಯ ಮುಂತಾದವುಗಳನ್ನು ಕೃಷ್ಣದೇವರಾಯರೇ ಕಟ್ಟಿಸಿದರು ಓಡಿಸಾದ ವಿಜಯದ ಪ್ರತೀಕವಾದ ಮಾರ್ನವಮಿಯ ದಿಬ್ಬವನ್ನೂ ಇವರೇ ಕಟ್ಟಿಸಿರುವರು. ಇವರ ಕಾಲದಲ್ಲಿ ಪ್ರಾರಂಭವಾದ ಬೇರೆ ಕೆಲವು ಕಾರ್ಯಗಳು ಮುಗಿಯಲಿಲ್ಲ.

ಕೃಷ್ಣದೇವರಾಯರು ತಮ್ಮ ಇಪ್ಪತ್ತೊಂದು ವರ್ಷಗಳ ಆಳಿಕೆಯಲ್ಲಿ ಹಿಂದೆ ಯಾರೂ ಮಾಡಿರಲಾರದಷ್ಟು ಕಾರ್ಯಗಳನ್ನು ಮಾಡಿತೋರಿಸಿ ಕನ್ನಡ ನಾಡಿನ ಪತಾಕೆಯನ್ನು ನಾನಾಕಡೆಗೆ ಹಾರಿಸಿದರು. ಒಕ್ಕಲಿಗರಿಗೆ ಉಪಯೋಗವಾಲೆಂದೂ ಕಾಲುವೆಗಳನ್ನು ಕಡಿಸಿ ನೀರಾವರಿ ಯೋಜನೆಯನ್ನು ಆಚರಣೆಯಲ್ಲಿ ತಂದಿದ್ದರೆಂದರೆ ಇವರ ಸರ್ವತೋಮುಖದ ಪ್ರಗತಿಯು ಗೋಚರವಾಗದೆ ಇರಲಾರದು. ಇವರ ತರುವಾಯವೇ ವಿಜಯನಗರ ರಾಜ್ಯವು ಇಳಿಮುಖವಾಗತೊಡಗಿತು.

ಇವರು ೧೫೩೦ ನೇ ಇಸ್ವಿಯಲ್ಲಿ ಮರಣ ಹೊಂದಿದರು ಮುಂದೆ ಅನತಿ ಕಾಲದಲ್ಲಿಯೇ ಅಂದರೆ ೧೫೬೫ ರಲ್ಲಿ ವಿಜಯನಗರ ಸಾಮ್ರಾಜ್ಯವು ಹಾಳಾಗಿ ಹೋಗಿ ಇಂದು ನಾವು ನೋಡುತ್ತಿರುವ ಪರಿಸ್ಥಿತಿಗೆ ಬಂದಿತು.

## ಕಿತ್ತೂರ ಚನ್ನಮ್ಮ !

ಕಿತ್ತೂರಿನ ಹೆಸರೆತ್ತಿದೊಡನೆ ಚನ್ನಮ್ಮ ರಾಣಿಯ ನೆನಪು ಬಾರದೇ ಇರಲಾರದು. ಅವರು ತೀರ ಇತ್ತೀಚೆಗೆ ಅಂದರೆ ಕಳೆದ ಶತಮಾನದಲ್ಲಿ ದೇಶಪ್ರೇಮಕ್ಕಾಗಿ, ಬ್ರಿಟಿಶರೊಂದಿಗೆ ಕಾದುತ್ತ ವೀರಸ್ವರ್ಗವನ್ನೈದಿದಂಥವರಾಗಿದ್ದಾರೆ.

ಕಿತ್ತೂರು ದೇಸಗತಿಯ ದೇಸಾಯರಾದ ಮಲ್ಲಸರ್ಜರಿಗೆ ರುದ್ರವ್ವ ಹಾಗು ಚನ್ನವ್ವರೆಂಬ ಇಬ್ಬರು ಪತ್ನಿಯರು. ರುದ್ರವ್ವನಿಗೆ ಶಿವಲಿಂಗರುದ್ರಸರ್ಜನೆಂಬ ಒಬ್ಬ ಮಗನಿದ್ದನು. ಮಲ್ಲಸರ್ಜನ ಮರಣದ ತರುವಾಯ ಈತನೇ ಪಟ್ಟಕ್ಕೆ ಬಂದರೂ ಮುಂದೆ ಕೆಲವೇ ದಿವಸಗಳಲ್ಲಿ ತೀರಿಕೊಂಡನು. ಮುಂದೆ ದೇಸಗತಿಗೆ ಬರಲು ವಾರಸ-ಸಂತಾನವಿಲದ ಮೂಲಕ ದತ್ತಕ ತೆಗೆದುಕೊಂಡರು.

ಆ ಬಗ್ಗೆ ಅಂದರೆ ತಾವು ದತ್ತಕ ತೆಗೆದುಕೊಂಡ ಸಂಗತಿಯನ್ನು ರುದ್ರಮ್ಮ ಹಾಗು ಚನ್ನಮ್ಮನವರು ಬ್ರಿಟಿಶ ಸರಕಾರಕ್ಕೆ ತಿಳಿಸಿದರು ಆ ರೀತಿ ತಿಳಿಸಲೇಬೇಕಾಗುತ್ತಿತ್ತು. ಏಕೆಂದರೆ ಆ ಸುಮಾರಿಗೆ ಬ್ರಿಟಿಶರು ಹಿಂದುಸ್ತಾನದಲ್ಲಿ ತಾವೇ ತಾವಾಗಿಬಿಟ್ಟಿದ್ದರು. ಪೇಶ್ವೇ ರಾಜ್ಯವು ಕೂಡ ಮಣ್ಣುಮುಕ್ಕಿ ಹೋಗಿತ್ತು. ಇರಲಿ, ಇವರು ದತ್ತಕ ತೆಗೆದುಕೊಂಡ ಸಂಗತಿಯು ತಿಳಿಯುತ್ತಲೆ ಅವರು ಧಾರವಾಡದ ಆಗಿನ ಕಲೆಕ್ಟರರಾದ ಥ್ಯಾಕರೆ ಎಂಬವರನ್ನು ಕಿತ್ತೂರಿಗೆ ಕಳುಹಿಸಿದರು

ಥ್ಯಾಕರೆಯುವರು ಕಿತ್ತೂರಿಗೆ ಬಂದ ನಂತರ ದತ್ತಕ ತೆಗೆದುಕೊಳ್ಳುವದರ ಬಗ್ಗೆ ಅನೇಕ ವಾದವಿವಾದಗಳಾಗಿ ಬ್ರಿಟಿಶ ಸರಕಾರವು ಈ ದತ್ತಕ ಪ್ರಕರಣಕ್ಕೆ ಸಮ್ಮತಿಯನ್ನೀಯುವದಿಲ್ಲ ಎನ್ನುವವರೆಗೂ ಮಾತು ಮುಂದುವರೆಯಿತು. ಆ ಮಾತಿಗೆ ಚನ್ನಮ್ಮನವರು ಹೆದರಲಿಲ್ಲ. ಇಷ್ಟೇ ಅಲ್ಲ, ಬಂದುದನ್ನು ಎದುರಿಸಲು ಸಿದ್ಧರಿರುವದಾಗಿಯೂ ಹೇಳಿದರು. ಅದರಂತೆ ಅನೇಕ ಕಡುಗಲಿಗಳನ್ನೂ ಸಿದ್ಧಮಾಡಿ ಯುದ್ಧದ ಸಿದ್ಧತೆ ನಡೆಸಿದರು.

ತಮ್ಮ ಆಜ್ಞೆಯು ಉಲ್ಲಂಘನೆಯಾದುದನ್ನು ಕೇಳಿ ಬ್ರಿಟಿಶ ಸರಕಾರಕ್ಕೆ ಮೇರೆ ಮೀರಿದ ಕೋಪ ಬಂದಿತು. ಕೂಡಲೇ ಅವರು ಗರಗದ ಮಾರ್ಗವಾಗಿ ಕೆಲ ಸೈನ್ಯವನ್ನು ಕಳಿಸಲು, ಸ್ವಾತಂತ್ರ್ಯ ಪ್ರೇಮಿಗಳಾದ ಕಿತ್ತೂರಿನವರಿಗೆ ಆ ಯುದ್ಧದಲ್ಲಿ ಜಯ ದೊರೆಯಿತು. ಇಬ್ಬರು ಬ್ರಿಟಿಶ ಮೇಲಾಧಿಕಾರಿಗಳು ನೆಲಕ್ಕುರುಳಿದರು ಸೆರೆಸಿಕ್ಕ ಅವರ ಕಡೆಯ ಹೆಂಗಸರನ್ನೂ ಮಕ್ಕಳನ್ನೂ ಚನ್ನಮ್ಮನವರು ಅತ್ಯಂತ ಜಾಗರೂಕತೆಯಿಂದ ಕಾಪಾಡಿದರು.

ತಮ್ಮವರು ಸೋತರೆಂಬ ಸಂಗತಿಯನ್ನೂ, ತಮ್ಮವರ ಹೆಂಗಸರು ಹಾಗು ಮಕ್ಕಳನ್ನು ಸುರಕ್ಷಿತ ಇರಿಸಿಗೊಂಡಿದ್ದಾರೆಂಬ ಸುದ್ದಿಯನ್ನು ಕೇಳಿ ಥ್ಯಾಕರೆಯು ನಿಮಗೆ ಹನ್ನೊಂದು ಹಳ್ಳಿಗಳನ್ನು ಕೊಡುತ್ತೇವೆ. ನೀವು ನಮಗೆ ದೇಸಗತಿಯನ್ನು ಒಪ್ಪಿಸಿರಿ ಎಂದನು. ಅದಕ್ಕೆ ಚನ್ನಮ್ಮನವರು ಒಪ್ಪದಾಗಲು ಅವನು ನಾಲ್ಕಾರು ತೋಫುಗಳನ್ನು ಕೋಟೆಯ ಬಾಗಿಲ

ಬಳಿ ಇರಿಸಿ, ಬಾಗಿಲನ್ನು ಹಾರಿಸಿಬಿಡುತ್ತೇನೆಂದು ಹೇಳಲು ಕೋಟೆಯ ಗೋಡೆಯ ಮೇಲಿದ್ದ ಬಾಳಪ್ಪನೆಂಬ ಸ್ವಾಮಿನಿಷ್ಟ ಕಲಿಯು ಅಲ್ಲಿಂದಲೇ ಥ್ಯಾಕರೆಯ ಮೇಲೆ ಗುರಿಯಿಟ್ಟು ಗುಂಡು ಹಾರಿಸಲು ಅವನು ನಿಂತಲ್ಲಿಯೇ ನೆಲಕ್ಕುರುಳಿದನು

ಥ್ಯಾಕರೆಯ ಶವವು ಧಾರವಾಡಕ್ಕೆ ತರಲ್ಪಟ್ಟಿತು. ಅಲ್ಲಿಯೇ ಅವನನ್ನು ಹೂಳಲಾಯಿತು. ಥ್ಯಾಕರೆ ಸಾಹೇಬನ ಗೋರಿಯೆಂದು ಈಗಲೂ ಜನ ಕರೆಯುತ್ತಾರೆ. ಇವನ ಮರಣದ ಸುದ್ದಿಯು ಗಾಳಿಯಂತೆ ಎಲ್ಲೆಡೆಗೂ ಹಬ್ಬಿತು. ಬೆಳಗಾಂವಿಯ ಚಾಪ್ಲಿನ್ ಎಂಬ ಕಮೀಶನರನು ದೊಡ್ಡದೊಂದು ಸೈನ್ಯವನ್ನು ತೆಗೆದುಕೊಂಡು ಕಿತ್ತೂರ ಕೋಟೆಯನ್ನು ಮುತ್ತಿದನು.

ಚಾಪ್ಲಿನ್ನನ ಸೈನ್ಯದೆದುರು ಚನ್ನಮ್ಮ ರಾಣಿಯ ಸೈನ್ಯವೆಂದರೆ ಗಜದೆದುರು ತೃಣವನ್ನು ನಿಲ್ಲಿಸಿದಂತಾಯಿತು. ಆದರೂ ಸ್ವಾತಂತ್ರ್ಯ ಪ್ರೇಮಿಗಳೂ, ತಾಯಿನಾಡಿಗಾಗಿ ದೇಹವನ್ನೇ ಆರ್ಪಿಸಲು ಸಿದ್ಧರಾದ ಹಿಡಿತುಂಬ ಕನ್ನಡ ಕಲಿಗಳು ಚನ್ನಮ್ಮ ರಾಣಿಯವರ ಮುಂದಾಳುತನದಲ್ಲಿ ಸಾಗರದಂತೆ ಅಪಾರವಾದ ಚಾಪ್ಲಿನ್ನನ ಸೇನಾಸಾಗರದ ಮೇಲೆ ಮುರಿದುಬಿದ್ದರು.

ಚನ್ನಮ್ಮ ರಾಣಿಯು ಖಡ್ಗಪಾಣಿಯಾಗಿ ರಣರಂಗಕ್ಕಿಳಿದು ರಣಚಂಡಿಯಂತೆ ಬ್ರಿಟಿಶರ ರುಂಡಗಳನ್ನು ಚಂಡಾಡಿದಳು. ಕನ್ನಡ ಕಲಿಗಳೂ ಜೀವದ ಹಂಗುದೊರೆದು ಕಾದಿದರು. ಆದರೂ ಬ್ರಿಟಿಶರ ಕೈಮೇಲಾಯಿತು ಅಗಣಿತ ಕನ್ನಡ ವೀರರು ಭೂಮಿಗೊರಗಿದರು. ಅದನ್ನು ಕಂಡ ಚನ್ನಮ್ಮ ರಾಣಿಯು ಸೋದರಿಯಾದ ರುದ್ರಮ್ಮನೊಂದಿಗೆ ಬೈಲಹೊಂಗಲದ ಬಳಿ ತಾಯಿ ಮಲಾಪಹಾರಿ ಮಡುಲೊಳಗೆ ವಿಶ್ರಾಂತಿಯನ್ನು ಪಡೆದಳು.



# ಸಮ್ರಾಟ ಅಶೋಕ !

ಭಾರತವು ಅನೇಕ ಅರಸರಿಂದ ಆಳಲ್ಪಟ್ಟಿದೆ. ಆದರೆ ಏಕಮೇವ ಸಮ್ರಾಟನೆಂದು ಕರೆಯಿಸಿಕೊಂಡ ಕೆಲವೇ ಅರಸರಲ್ಲಿ ಅಶೋಕನೂ ಒಬ್ಬ ನಾಗಿದ್ದಾನೆ. ಈತನ ತಂದೆಯ ಹೆಸರು ಬಿಂದುಸಾರ. ಇವನು ಬಾಲ್ಯ ದಲ್ಲಿ ಓದು-ಬರಹದೊಳಗೆ ನಿಷ್ಣಾತನಿದ್ದಂತೆ ದೊಡ್ಡ ಮನಸ್ಸಿನವನೂ ಆಗಿದ್ದನು. ಅಲ್ಲದೆ ಅರಸುಕುವರರು ಕಲಿಯುವಂಥ ಕ್ಷಾತ್ರಿ ವಿದ್ಯೆಗಳ ಲ್ಲಿಯೂ ಇವನು ಪಾರಂಗತನಾದನು.

ತನ್ನ ತಂದೆಯಾದ ಬಿಂದುಸಾರನು ರಾಜ್ಯವನ್ನಾಳುತ್ತಿರುವಾಗ ಇವನು ಉಜ್ಜಯಿನಿ ಹಾಗು ತಕ್ಷಶಿಲೆ ಳೇ ಮುಂತಾದ ಕೆಲವು ಪ್ರಾಂತಗಳ ಅರಸರ ಪ್ರತಿನಿಧಿಯಾಗಿ ಆಳಿ ತನ್ನ ಪ್ರಭಾವವನ್ನು ಬೀರಿದ್ದನು. ಅದೇ ಸಮಯದಲ್ಲಿ ಅವನ ತಂದೆಯು ಜಡ್ಡಿಗೆ ಬಿದ್ದು ತೀರಿಕೊಳ್ಳಲು ಜನಪ್ರಿಯ ನಾದ ಅಶೋಕನು ತಾನೇ ಪಟ್ಟಕ್ಕೆ ಕುಳಿತನು ಈತನಿಗೆ ಸುಷೀಮನೆಂಬ ಅಣ್ಣನೊಬ್ಬನಿದ್ದರೂ ಅವನು ವಿಲಾಸಿಯೂ, ಮಂತ್ರಿಮಂಡಳದವರ ವಿಶ್ವಾಸವನ್ನು ಕಳೆದುಕೊಂಡವನೂ ಆಗಿದ್ದನು.

ಇವೇ ಕಾರಣಗಳಿಂದ ಮಂತ್ರಿಗಳು ಅಶೋಕನಿಗೆ ಪಟ್ಟಕಟ್ಟಿದರು. ಮುಂದೆ ಸುಷೀಮನು ತಾನೇ ಧೊರೆಯಾಗಬೇಕೆಂದು ಸೈನ್ಯವನ್ನು ಕಟ್ಟಿ ಯುದ್ಧದ ಸಿದ್ಧತೆಯೊಳಗಿರುವಾಗಲೇ ತೀರಿಕೊಂಡನು. ಇವನ ಮರಣ ದಿಂದ ಅಶೋಕನ ಮಾರ್ಗದಲ್ಲಿನ ಒಂದು ಕಂಟಕವು ಪರಿಹಾರ ವಾದಂತಾಯಿತು.

ಅಶೋಕನು ಪಟ್ಟಕ್ಕೆ ಬಂದ ತರುವಾಯ ಉತ್ತರದಿಂದ ದಕ್ಷಿಣದ ನೆಲ್ಲೂರಿನವರೆಗೂ ರಾಜ್ಯವನ್ನು ಬೆಳೆಯಿಸಿದನು, ಆದರೆ ಪೂರ್ವದಲ್ಲಿದ್ದ ಕಲಿಂಗ ರಾಜ್ಯದ ಅರಸನು ಮಾತ್ರ ಸ್ವತಂತ್ರನಾಗಿದ್ದನು. ಅವನ ಬಳಿ ಬಲಾಢ್ಯ ಗಜಸೇನೆ ಇದ್ದುದರಿಂದ ಅವನ ಮೇಲೆ ಕೈಮಾಡಲು ಎಲ್ಲರೂ ಹೆದರುತ್ತಿದ್ದರು ಆದರೆ ಯುದ್ಧದಲ್ಲಿ ಪ್ರತ್ಯಕ್ಷ ಯಮನಂತಿದ್ದ ಅಶೋ

ಕನು ಸಾಕಷ್ಟು ಸೈನ್ಯದೊಂದಿಗೆ ಕಲಿಂಗ ರಾಜ್ಯದ ಮೇಲೆ ದಂಡೆತ್ತಿ ಹೋದನು.

ಕಲಿಂಗ ರಾಜನೂ ಅಶೋಕನೊಂದಿಗೆ ಕಾದಲೋಸುಗ ಸಾಕಷ್ಟು ಸನ್ನಾಹವನ್ನು ಮಾಡಿದನು. ಇರ್ವರಲ್ಲಿಯೂ ಕಾಳಗವು ಪ್ರಾರಂಭವಾಯಿತು. ಆದರೆ ಅಶೋಕನೆದುರು ಕಲಿಂಗದವರ ಆಟ ನಡೆಯಲಿಲ್ಲ. ಆ ಯುದ್ಧದಲ್ಲಿ ಸುಮಾರು ಒಂದು ಲಕ್ಷಕ್ಕೂ ಮಿಕ್ಕಿ ಕಲಿಂಗ ವೀರರು ಭೂಮಿಗೊರಗಿದರೆಂದು ಹೇಳಲಾಗುತ್ತಿದೆ ಈ ರೀತಿಯಾಗಿ ಕಲಿಂಗ ರಾಜ್ಯವು ಅಶೋಕನ ವಶವಾಯಿತು

ಪ್ರತ್ಯಕ್ಷ ಯಮನಂತಿದ್ದ ಅಶೋಕನಿಗೆ ಕಲಿಂಗ ಯುದ್ಧದಲ್ಲಿಯ ಮಾನವರ ಕಗ್ಗೊಲೆಯಿಂದ ತಾನೆಂಥ ಕಟುಕನು ಎಂದುಕೊಳ್ಳುವಂತಾಯಿತು. ತನ್ನೊಳಗೆ ತಾನೇ ಆ ಬಗ್ಗೆ ನೊಂದುಕೊಂಡನು. ಇಷ್ಟೇ ಅಲ್ಲ ಇನ್ನು ಮುಂದೆ ಯುದ್ಧವನ್ನೇ ಮಾಡದೆ ಧರ್ಮದಿಂದಲೇ ರಾಜ್ಯವನ್ನು ವಿಸ್ತರಿಸುವ ಹೊಸ ಯೋಜನೆಯನ್ನು ಮಾಡಿದನು. ಈ ರೀತಿಯಾಗಿ ಅವನು ಬೌದ್ಧ ಧರ್ಮದ ಮೊರೆಹೋದನು

ಬೌದ್ಧ ಮತದ ತತ್ವಗಳಿಗೆ ಮಾರುಹೋದ ಅಶೋಕನಿಗೆ ಬುದ್ಧನ ಬಗ್ಗೆ ಗೌರವಾದರಗಳು ಹುಟ್ಟಿದವು. ಬುದ್ಧ ಯತಿಗಳಿಗೆ ಇವನ ರಾಜ್ಯದಲ್ಲಿ ಎಲ್ಲಿಲ್ಲದ ಪ್ರಾಧಾನ್ಯತೆ ದೊರೆಯತೊಡಗಿತು, ಶಾಂತಿಪ್ರಿಯನಾದ ಅಶೋಕನು ದೇಶದ ನಾನಾ ಮೂಲೆಗಳಿಗೆ ಶಾಂತಿದೂತರನ್ನು ಕಳುಹಿಸಿದನು. ವಿದೇಶಗಳಿಗೂ ಬೌದ್ಧ "ಭಿಕ್ಷು"ಗಳು ಹೋಗಿಬಂದರು.

ಶಾಂತಿ ಧರ್ಮಕ್ಕಾಗಿ ಪ್ರಯತ್ನಪಟ್ಟು ಶೋಕರಹಿತ ರಾಜ್ಯವನ್ನು ಕಟ್ಟಿದ ಅಶೋಕನು ಮೂವತ್ತೆರಡು ವರ್ಷಗಳವರೆಗೆ ರಾಜ್ಯಭಾರ ಮಾಡಿದನು. ಅವನಿಗೆ ಪ್ರಿಯದರ್ಶಿ ಎಂದು ಕರೆಯುತ್ತಿದ್ದುದೂ ಉಂಟು.



# ಪೃಥ್ವೀರಾಜ ಚವ್ಹಾಣ!

ಕಾಲಕ್ಕೆ ತಕ್ಕಂತೆ ಕನ್ನಡಿಗರು, ರಜಪೂತರು ಹಾಗು ಮರಾಠರು ತಮ್ಮ ಶೌರ್ಯ-ಪರಾಕ್ರಮಗಳನ್ನು ತೋರಿಸಿರುವದು ಇತಿಹಾಸದಿಂದ ತಿಳಿದುಬರುವದು. ರಜಪೂತರಲ್ಲಿ ಅಗ್ರಣಿಯೆನಿಸಿದವನು ಅಜಮೀರದ ಪೃಥ್ವೀರಾಜನು. ದಿಲ್ಲಿಯ ಅರಸು ಅನಂಗಪಾಲನಿಗೆ ಗಂಡುಮಕ್ಕಳಿದ್ದಿಲ್ಲ. ಇಬ್ಬರು ಹೆಣ್ಣುಮಕ್ಕಳಿದ್ದರು. ಅವರನ್ನು ಕನೋಜ ಹಾಗು ಅಜಮೀರದ ಅರಸರೊಂದಿಗೆ ಮದುವೆ ಮಾಡಿಕೊಟ್ಟಿದ್ದನು. ಕನೋಜಕ್ಕೆ ಕೊಟ್ಟ ಮಗಳ ಹೊಟ್ಟೆಯಿಂದ ಜಯಚಂದನೂ, ಅಜಮೀರದವಳ ಹೊಟ್ಟೆಯಿಂದ ಪೃಥ್ವೀರಾಜನೂ ಹುಟ್ಟಿದರು.

ಅನಂಗಪಾಲನಿಗೆ ಗಂಡು ಸಂತಾನವಿರಲಿಲ್ಲ. ಅದಕ್ಕಾಗಿ ಅವನು ತನ್ನ ತರುವಾಯ ರಾಜ್ಯಕ್ಕೆ ಪೃಥ್ವೀರಾಜನನ್ನೇ ಉತ್ತರಾಧಿಕಾರಿಯೆಂದು ನಿಯಮಿಸಿಕೊಂಡದ್ದು ಜಯಚಂದನ ಅಸೂಯೆಗೆ ಕಾರಣವಾಯಿತು ಇಬ್ಬರಿಗೂ ಸರಿಯಾಗಿ ರಾಜ್ಯವನ್ನು ಹಂಚಿಕೊಡದೆ ಅವನೊಬ್ಬನಿಗೆ ಎಲ್ಲವನ್ನೂ ಕೊಟ್ಟುದಕ್ಕೆ ಅಸಮಾಧಾನಪಟ್ಟುಕೊಂಡ ಜಯಚಂದನು ಒಳಗೊಳಗೆ ಅವನನ್ನು ದ್ವೇಷಿಸತೊಡಗಿದನು.

ದಿಲ್ಲಿಯ ಸಿಂಹಾಸನವನ್ನೇರಿದ ನಂತರ ಪೃಥ್ವೀರಾಜನು ಮೇಲೆ ನಾಲ್ಕಾರು ಯುದ್ಧಗಳಲ್ಲಿ ಜಯಶೀಲನಾದುದರಿಂದ ಎಲ್ಲರೂ ಪೃಥ್ವೀರಾಜನನ್ನು ಶೂರನೆಂದು ಅವನನ್ನು ಹೊಗಳತೊಡಗಿದರು. ಇದರಿಂದಂತೂ ಜಯಸಿಂಹನಿಗೆ ಇನ್ನಷ್ಟು ಹೊಟ್ಟೆಯುರಿಯಾಗಿ ಅವನನ್ನು ಮುರಿಯಲು ಪ್ರಯತ್ನಿಸತೊಡಗಿದನು. ಆದರೂ ಅವೊಂದೂ ಯಶಸ್ವಿಯಾಗಲಿಲ್ಲ.

ಜಯಚಂದನಿಗೆ ಸಂಯುಕ್ತೆ ಎಂಬ ಅತಿ ಸುಂದರಿಯಾದ ಮಗಳೊಬ್ಬಳಿದ್ದಳು. ಪೃಥ್ವೀರಾಜನನ್ನೇ ಮದುವೆಯಾಗಬೇಕೆಂದು ಅವಳ ಹಟವಿದ್ದಿತು. ಆದರೂ ಜಯಚಂದನು ಅವಳ ಮನಸ್ಸಿಗೆ ವಿರೋಧವಾಗಿ ಸ್ವಯಂವರವನ್ನು ರಚಿಸಿ ಎಲ್ಲ ಅರಸರನ್ನೂ ಕರೆಕಳುಹಿದರು. ಆದರೆ ಪೃಥ್ವೀರಾಜನಿಗೆ ಮಾತ್ರ ಆಮಂತ್ರಣವನ್ನು ಕಳುಹಿಸಲಿಲ್ಲ. ಇಷ್ಟೇಅಲ್ಲ;

ಜೀವನನ್ನು ಅಪಮಾನಗೊಳಿಸಲೋಸುಗ ಅವನದೊಂದು ಮೂರ್ತಿಯನ್ನು ಮಾಡಿ ಬಾಗಿಲಬಳಿ ದ್ವಾರಪಾಲಕನಂತೆ ನಿಲ್ಲಿಸಿದನು.

ಸ್ವಯಂವರ ದಿವಸ ಎಲ್ಲ ಅರಸರೂ ಅಲಂಕಾರದೊಂದಿಗೆ ಮಂಟಪ ದೊಳಗೆ ಬಂದರು. ಪೃಥ್ವಿರಾಜನೂ ವೇಷ ಮರೆಯಸಿಕೊಂಡು ತನ್ನ ಜನರೊಂದಿಗೆ ಅಲ್ಲಿಗೆ ಬಂದಿದ್ದನು. ಕೈಯಲ್ಲಿ ಪುಷ್ಪಹಾರವನ್ನು ಹಿಡಿದು ಮಂಟಪದೊಳಗೆ ಪ್ರವೇಶಿಸಿದ ಸಂಯುಕ್ತೆಯು ಯಾರತ್ತ ಗಮನಕೊಡದೆ ನೆಟ್ಟಗೆ ಹೋಗಿ ಬಾಗಿಲಬಳಿ ನಿಲ್ಲಿಸಿದ ಪೃಥ್ವೀರಾಜನ ಪ್ರತಿಮೆಗೆ ಮಾಲೆ ಹಾಕಿದಳು.

ಅದೇ ಸಮಯವನ್ನು ಕಾಯುತ್ತಿದ್ದ ಪೃಥ್ವೀರಾಜನು ಅವಳನ್ನು ಕರೆದುಕೊಂಡು ಹೋಗಿ ಮದುವೆ ಮಾಡಿಕೊಂಡನು. ಮುಂದೆ ಇವನು ಸಂಯುಕ್ತೆಯ ಸಹವಾಸದಲ್ಲಿ ರಾಜ್ಯದಾಡಳಿತವನ್ನು ಪೂರ್ಣ ಮರೆತೇ ಬಿಟ್ಟನು. ಹೀಗಾಗಿ ಜಯಚಂದನು ತನ್ನ ಕಾರಸ್ಥಾನದಲ್ಲಿ ಯಶಸ್ವಿಯಾ ಗಲು ಕಾರಣವಾಯಿತು. ಏಕೆಂದರೆ ಗಿಝನಿಯ ಮಹಮೂದನು ದಿಲ್ಲಿಯ ಸಿಂಹಾಸನದ ಮೇಲೆ ಕಣ್ಣಿಟ್ಟಿದ್ದನು. ಅವನಿಗೆ ಜಯಚಂದನೇ ಆಮಂತ್ರಣ ಕೊಟ್ಟನು.

ಜಯಚಂದನ ಬಯಕೆಯ ಮೇರೆಗೆ ಮಹಮೂದನು ದಂಡೆತ್ತಿ ಬರ ಲು ಪೃಥ್ವೀರಾಜನು ಮಾಂಡಲಿಕ ರಾಜನ ನೆರವಿನಿಂದ ಅವನನ್ನು ಸೋಲಿ ಸಿ ಓಡಿಸಿದನು. ಸೋಲಿನಿಂದ ಅವಮಾನಿತನಾದ ಮಹಮೂದನು ಮತ್ತೆ ದೊಡ್ಡ ಸೈನ್ಯದೊಡನೆ ಬಂದು ಪೃಥ್ವೀರಾಜನನ್ನು ಯುದ್ಧದಲ್ಲಿ ಸೆರೆಹಿಡಿದು ಕೊಂದುಹಾಕಿದನು.



# ರಾಣಾ ಪ್ರತಾಪಸಿಂಹ !

ಜೀವನದ ಕೊನೆಯವರೆಗೂ ಅಕಬರ ಬಾದಶಹನಿಗೆ ತಲೆಬಾಗದ ರಜಪೂತ ಅರಸನೆಂದರೆ ಪ್ರತಾಪಸಿಂಹನೊಬ್ಬನೇ ಎಂದು ಹೇಳಬಹುದು.

ಈತನು ರಾಣಾಸಂಗನ ಮೊಮ್ಮಗನು ಮೊಗಲರೊಡನೆ ರಾಣಾಸಂಗನು ಪ್ರಾರಂಭ ಮಾಡಿದ ಯುದ್ಧವು ಮೊಮ್ಮಗ ಪ್ರತಾಪಸಿಂಹನ ಕಾಲದ ವರೆಗೂ ಮುಂದುವರೆಯಿತು.

ಹೆಸರಿಗೆ ತಕ್ಕಂತೆ ಶೂರಕೇಸರಿಯಾಗಿದ್ದ ಪ್ರತಾಪಸಿಂಹನು ಮೊಗಲ ರೊಡನೆ ಸಂಬಂಧವಿರಿಸಿಕೊಳ್ಳಲು ಸುತರಾಂ ಒಪ್ಪಲಿಲ್ಲ. ಇಷ್ಟೇ ಅಲ್ಲ. ಆ ರೀತಿ ಯಾರೂ ನಡೆದುಕೊಳ್ಳಕೂಡದೆಂದು ಆಜ್ಞೆಯನ್ನು ಕೂಡ ವಿಧಿ ಸಿದನು. ಆ ಕಾಲದಲ್ಲಿ ಮೊಗಲರೊಂದಿಗೆ ಸಖ್ಯ ಬೆಳೆಯಿಸಬೇಕೆಂಬ ಅಭಿಲಾಷೆಯಿಂದ ಎಷ್ಟೋಜನ ರಜಪೂತ ಅರಸರು ಮೊಗಲರೊಂದಿಗೆ ಶರೀರ ಸಂಬಂಧ ಬೆಳೆಯಿಸಿದರು. ಆದರೆ ಪ್ರತಾಪನ ಪುನೀತನವು ಮಾತ್ರ ಆ ಮಾತಿಗೆ ಅಪವಾದವಾಯಿತು.

ಪ್ರತಾಪಸಿಂಹನ ತಂದೆಯಾದ ಉದಯಸಿಂಹನ ಕಾಲದಲ್ಲಿಯೇ ಚಿತ್ತೂರು ಅವರ ಕೈಬಿಟ್ಟಿತ್ತು ಅಂದಿನಿಂದ ಅವರು ಉದೇಪುರವನ್ನು ನಿರ್ಮಿಸಿ ಅಲ್ಲಿಯೇ ರಾಜ್ಯಭಾರ ನಡೆಯಿಸಿದ್ದರು. ಮಹಾರಾಣಾ ಪ್ರತಾ ಪನು, ಚಿತ್ತೂರು ಕೋಟೆಯನ್ನು ಕೈವಶ ಮಾಡಿಕೊಳ್ಳುವವರೆಗೆ ಬಂಗಾ ರದ ಪಾತ್ರೆಗಳಲ್ಲಿ ಊಟಮಾಡಲಾರೆ, ಸುಖೋಪಭೋಗದ ವಸ್ತುಗಳನ್ನು ಹೊರಳಿ ನೋಡಲಾರೆ ಎಂದು ಪಣತೊಟ್ಟು, ಎಲೆಯ ಮೇಲೆ ಊಟ ಮಾ ಡುವ ಹಾಗು ಹುಲ್ಲಿನ ಹಾಸುಗೆಯ ಮೇಲೆ ಮಲಗುವ ಪರಿಪಾಠ ವನ್ನಿರಿಸಿದನು.

ಪ್ರತಾಪನ ಕೀರ್ತಿಯನ್ನು ಕೇಳಿದ ಅಕಬರನು ಅವನೊಂದಿಗೆ ಸಖ್ಯ ಬೆಳೆಯಿಸಬೇಕೆಂಬ ಉದ್ದೇಶದಿಂದ ತನ್ನ ಅತೀ ಸಮೀಪದ ಸರದಾರನಾದ ರಾಜಾ ಮಾನಸಿಂಗನನ್ನು ಅವನ ಬಳಿ ಕಳಿಸಿದನು. ಆದರೆ ಸ್ವಾಭಿಮಾನಿ ಯಾದ ರಾಣಾನೆದುರು ಮಾನಸಿಂಗನ ಸಂಧಾನವು ಯಶಸ್ವಿಯಾಗದ್ದಕ್ಕೆ ಯುದ್ಧವು ಅನಿವಾರ್ಯವಾಯಿತು. ಅದೇ ರೀತಿ ಇಬ್ಬಣದವರೂ ಸಿದ್ಧತೆ ನಡೆಯಿಸಿದರು.

ಅವರೀರ್ವರಲ್ಲಿ ಪ್ರಥಮ ಯುದ್ಧವು ಹಳದೀ ಘಟ್ಟದ ಬಳಿ ಆಯಿತು. ಈ ದದ್ಧಲ್ಲಿಯು ಅಸಂಖ್ಯ ಮೊಗಲ ಸೈನಿಕರು ಕಾದಿದರು.

ರಜಪೂತ ಸೈನ್ಯವು ತೀರ ಕಡಿಮೆ ಇದ್ದುದರಿಂದ ವಿಜಯಶ್ರೀಯು ಮೊಗಲರ ಕೊರಳಿಗೆ ಮಾಲೆ ಹಾಕಿದಳು ಈ ರೀತಿಯಾಗಿ ಪರಾಭವ ಹೊಂದಿದ ಪ್ರತಾಪನು ತನ್ನ ಕೆಲ ಆತ್ಮೀಯ ಪರಿವಾರದವರೊಂದಿಗೆ ಹುಲಿ-ಸಿಂಹಗಳಂತೆ ಕಾನನದಲ್ಲಿಯ ಗುಹೆಗಳಲ್ಲಿ ವಾಸಮಾಡತೊಡಗಿದನು. ಆ ಸಮಯದಲ್ಲಿ ವೀರಕೇಸರಿ ಪ್ರತಾಪಸಿಂಹನು ಪಟ್ಟ ಕಷ್ಟವನ್ನು ವರ್ಣಿಸುವದು ಸಾಧ್ಯವೇ ಇಲ್ಲ.

ಒಂದೊಂದು ತುಂಡು ರೊಟ್ಟಿಯೂ ಅವನಿಗೆ ಬಂಗಾರವಾಯಿತು. ಅವನ ಚಿಕ್ಕಮಕ್ಕಳು ಹಸಿವೆಯಿಂದ ಬಳಲಿದರು ಆದರೂ ಆ ಕಡುಗಲಿಯು ತನ್ನ ಧ್ಯೇಯವನ್ನು ಬಿಡಲಿಲ್ಲ. ಭಿಲ್ಲ ಜನರು ಅವನಿಗೆ ಸಹಾಯಕರಾದರು. ಅಲ್ಲದೆ ಕೆಲಕಾಲದ ನಂತರ ಹಿಂದಿನ ಮಂತ್ರಿಮಂಡಲದೊಳಗಿನವನೊಬ್ಬನು ಅವನಿಗೆ ಅಪಾರ ಹಣವನ್ನು ಕೊಟ್ಟು ಹೊಸ ಸೈನ್ಯವನ್ನು ಕಟ್ಟಲು ಹೇಳಿದನು.

ನವಚೈತನ್ಯ ಪಡೆದ ಪ್ರತಾಪಸಿಂಹನು ಮತ್ತೊಮ್ಮೆ ಮೊಗಲರ ವಿರುದ್ಧ ರಣದುಂದುಭಿಯನ್ನು ಬಾರಿಸಿ ಒಂದರ ಹಿಂದೊಂದರಂತೆ ಎಲ್ಲ ಕೋಟೆಗಳನ್ನು ಕೈವಶ ಮಾಡಿಕೊಂಡನು. ಆದರೆ ಅವನ ಗುರಿಯಾದ ಚಿತ್ತೂರು ಮಾತ್ರ ವಶವಾಗಲಿಲ್ಲ. ಆ ಚಿತೆಯಲ್ಲಿಯೆ ಅವನು ಅಸುವನ್ನೀಗಿದನು



## ಶಿವಾಜಿ !

ದಕ್ಷಿಣದಲ್ಲಿಯ ಹಿಂದುಗಳ ಪರಿಸ್ಥಿತಿ ಅತಿ ಶೋಚನೀಯವಾಗಿರುವಂಥ ಸಮಯದಲ್ಲಿ ಶಿವಾಜಿಯು ಜೀಜಾಬಾಯಿಯವರ ಹೊಟ್ಟೆಯಲ್ಲಿ ಶಿವನೇರಿ ಎಂಬಲ್ಲಿ ಹುಟ್ಟಿದನು. ಈತನ ತಂದೆಯ ಹೆಸರು ಶಹಾಜಿ ಭೋಸಲೆ.

ಶಿವಾಜಿಯ ತಂದೆಯು ವಿಜಾಪೂರದ ಆದಿಲ್‌ಶಾಹನ ದರಬಾರಿನಲ್ಲಿ ದೊಡ್ಡ ಸರದಾರನಾಗಿದ್ದನು. ವೀರ ಮಾತೆಯಾದ ಜೀಜಾಬಾಯಿಯು ಶಿವಾಜಿಗೆ ಚಿಕ್ಕಂದಿನಲ್ಲಿಯೇ ಕುದುರೆ ಹತ್ತುವದು, ಕತ್ತಿ ಹಾಗು ಲಾಠಿಗಳನ್ನು ತಿರುವುವದೇ ಮುಂತಾದ ವೀರರಿಗುಚಿತವಾದ ವಿದ್ಯೆಗಳನ್ನು ಕಲಿಸಲೋಸುಗ ದಾದಾಜಿ ಕೊಂಡದೇವನೆಂಬೊಬ್ಬ ಗುರುವನ್ನು ನಿಯಮಿಸಿದಳು.

ದಾದಾಜಿ ಕೊಂಡದೇವನು ವೀರರ ಶಿಕ್ಷಣದ ಜೊತೆಗೆ ಸ್ವಾತಂತ್ರ್ಯದ ಮಂತ್ರವನ್ನೂ ಕಿವಿಯಲ್ಲಿ ಊದಿದನು. ಅದುವೇ ಮುಂದೆ ಶಿವಾಜಿಗೆ ತಾರಕಮಂತ್ರವಾಯಿತು. ಜಾವಳಿಯ ಅರಣ್ಯದೊಳಗೆ ವಾಸಿಸುತ್ತಿದ್ದ ಮಾವಳಿ ಜನರ ಸಹಾಯದಿಂದ ಶಿವಾಜಿಯು ತನ್ನ ಕಾರ್ಯವನ್ನು ಪ್ರಾರಂಭಿಸಿದನು. ಮೊದಮೊದಲು ಯಾರೂ ಇವನ ಕಾರ್ಯಗಳತ್ತ ಅಷ್ಟೊಂದು ಲಕ್ಷ ಹಾಕಿರಲಿಲ್ಲ.

ತಮ್ಮೆದುರು ನಿಲ್ಲುವದು ಈ ಹುಡುಗನಿಂದ ಸಾಧ್ಯವೇ ? ಎಂದು ವೈಮರೆತಿದ್ದ ಮುಸಲ್ಮಾನ ಅರಸರಿಗೆ ಶಿವಾಜಿಯು ಏಳು ಕೆರೆಯ ನೀರು ಕುಡಿಸಿದನು. ದಿಲ್ಲಿಯ ಚಕ್ರವರ್ತಿ ಔರಂಗಜೇಬನು ಕೂಡ ಶಿವಾಜಿಯು ಮುಂದೆ ಕೈಊರಬೇಕಾಯಿತು. ಇಷ್ಟೇ ಅಲ್ಲ, ದಕ್ಷಿಣವನ್ನೇ ಸೂರೆಗೊಳ್ಳುತ್ತೇನೆಂದು ಬಂದವನು ದಕ್ಷಿಣದಲ್ಲಿಯೇ ಸಮಾಧಿ ಹೊಂದಬೇಕಾಯಿತು.

ಅಪ್ರತಿಮ ವೀರನೂ, ಚಾಣಾಕ್ಷನೂ ಆದ ಶಿವಾಜಿಯು ಅನೇಕ ಕಷ್ಟಗಳನ್ನು ಎದುರಿಸಿ ರಾಜ್ಯವನ್ನು ಕಟ್ಟಿದನು. ನೇತಾಜಿ ಪಾಲಕರ, ತಾನಾಜಿ ಮಾಲಸುರೆ, ಧನಾಜಿ ಜಾಧವ, ಸಂತಾಜಿ ಘೋರ್ಪಡೆ ಮುಂತಾದ ವೀರರು ಇವನ ನೆರಳಿನಂತಿದ್ದು, ರಾಜ್ಯಸ್ಥಾಪನೆಗಾಗಿ ಹೋರಾಡಿ ಅಮರರಾಗಿದ್ದಾರೆ.

ರಾಜ್ಯ ಸ್ಥಾಪಿಸಿದ ನಂತರ ಶಿವಾಜಿಯು ರಾಮದಾಸರ ಹೇಳಿಕೆಯಂತೆ ನಡೆದುಕೊಂಡನು. ಈತನಿಗೆ ಸಂಭಾಜಿ ಹಾಗು ರಾಜಾರಾಮ ಎಂಬ ಇಬ್ಬರು ಮಕ್ಕಳಿದ್ದರು. ಕಷ್ಟಬಟ್ಟು ಶಿವಾಜಿಯು ಸಂಪಾದಿಸಿದ

ರಾಜ್ಯವನ್ನು ಬೆಳೆಯಿಸುವದು ಇವರಿಂದ ಆಗಲಿಲ್ಲ. ಶಿವಾಜಿಯು ಕಾಲಿಗೆ ಮುಂಡೆಯಾಗಿ ತೀರಿಕೊಂಡನು. ತಾಯಿಯ ಮೇಲೆ ಅತ್ಯಂತ ಮಮತೆ ಯನ್ನಿರಿಸಿದ್ದ ಶಿವಾಜಿಗೆ ಭವಾನಿಯು ದರ್ಶನವಿತ್ತಿದ್ದಳೆಂದು ಹೇಳುತ್ತಾರೆ.



# ಸುಲ್ತಾನಾ ಚಾಂದಬೀಬಿ!

ಭಾರತದ ಇತಿಹಾಸದೊಳಗೆ ಮಿಂಚಿಹೋದ ಮಹಿಳೆಯರಲ್ಲಿ ಚಾಂದಬೀಬಿಯೂ ಒಬ್ಬಳಾಗಿದ್ದಾಳೆ. ಕಲಿತನದಲ್ಲಿ ಇವಳು ಕಡಿಮೆ ಯವಳಿದ್ದಿಲ್ಲವೆಂಬುದು ಇತಿಹಾಸದಿಂದ ಗೊತ್ತಾಗುತ್ತದೆ.

ಚಾಂದಬೀಬಿಯು ಅಹಮ್ಮದನಗರದ ನಿಜಾಮುಶಹನ ಮಗಳು. ಇವಳ ಮದುವೆಯು ವಿಜಾಪುರದ ಅಲ್ಲೀಆದಿಲ್‌ಶಹನೊಂದಿಗೆ ಆಗಿದ್ದಿತು. ಆದಿಲ್‌ಶಹನು ಮಕ್ಕಳಿಲ್ಲದೇ ತೀರಿಹೋಗಿದ್ದರಿಂದ ಚಾಂದಬೀಬಿಯು ತನ್ನ ಮೈದುನನ ಮಗನನ್ನು ದತ್ತಕ ತೆಗೆದುಕೊಂಡು ಅವನನ್ನು ಪಟ್ಟಕ್ಕೆ ಕೂಡ್ರಿಸಿ ರಾಜ್ಯದ ಆಡಳಿತವನ್ನು ತಾನೇ ವಹಿಸಿಕೊಂಡಳು.

ಈಕೆಯ ಆಳಿಕೆಯು ಪ್ರಜೆಗಳಿಗೆ ಅತ್ಯಂತ ಪ್ರಿಯಕರವಾಗಿತ್ತು. ಆದರೆ ಮಂತ್ರಿಮಂಡಲದೊಳಗಿನವನೊಬ್ಬನು ಅವಳ ಆಳಿಕೆಯನ್ನು ಅಕಾ ರಣವಾಗಿ ವಿರೋಧಿಸತೊಡಗಿದ್ದರಿಂದ ಚಾಂದಬೀಬಿಯು ಅವನನ್ನು ಅನಿ ವಾರ್ಯವಾಗಿ ದಂಡಿಸಬೇಕಾಯಿತು. ಅವನ ಸ್ಥಾನದಲ್ಲಿ ಮತ್ತೊಬ್ಬ ನನ್ನು ನಿಯಮಿಸಿದಳು. ಆದರೆ ಆ ವಿಶ್ವಾಸಘಾತುಕನು ಅವಳನ್ನು ಸೆರೆ ಹಿಡಿದು ಸಾತಾರೆಯಲ್ಲಿಡಲು, ಅವಳಿಗಾಗಿ ಜೀವ ಕೊಡಲು ಸಿದ್ಧರಿದ್ದ ವಿಜಾಪುರದವರು ಸಾತಾರೆಯವರೆಗೆ ಹೋಗಿ ಅವಳನ್ನು ಸೆರೆಯಿಂದ ಮುಕ್ತಮಾಡಿ ವೈಭವದೊಂದಿಗೆ ಕರೆತಂದರು. ಈ ರೀತಿಯ ಕಲಹ

ಗಳಿಂದಾಗಿ ಚಾಂದಬೀಬಿಯು ಅಹಮ್ಮದನಗರಕ್ಕೆ ಹೋಗಿ ಇರುವ ಪ್ರಸಂಗ ಬಂದು ಕೊನೆಯವರೆಗೂ ಅಲ್ಲಿಯೇ ಇದ್ದುಬಿಟ್ಟಳು.

ಮುಂದೆ ಕೆಲ ದಿನಗಳ ನಂತರ ಅವಳ ತಂದೆಯೂ ತೀರಿಕೊಂಡನು. ಅವನಿಗೂ ಗಂಡು ಸಂತಾನವಿರಲಿಲ್ಲ. ಮುಂದೆ ಯಾರು ಪಟ್ಟಕ್ಕೆ ಬರ ಬೇಕೆಂಬುದರ ಬಗ್ಗೆ ಅಲ್ಲಿಯ ಸರದಾರರಿಗೂ ಹಾಗು ಚಾಂದಬೀಬಿಗೂ ವೈಮನಸ್ಸುಂಟಾಯಿತು ಅವರಲ್ಲೊರ್ವನು ಅಕಬರನ ಮಗನಾದ ಮುರಾದನನ್ನು ತನ್ನ ಸಹಾಯಕ್ಕಾಗಿ ಕೇಳಿಕೊಂಡನು. ಇದನ್ನೇ ನಿರೀಕ್ಷಿಸುತ್ತಿದ್ದ ಮುರಾದನು ಸಹಾಯ ಮಾಡಲು ಸಂತೋಷದಿಂದ ಒಪ್ಪಿಕೊಂಡನು

ಕೂಡಲೇ ಮುರಾದನು ಅಗಣಿತ ಸೈನ್ಯದೊಡನೆ ಬಂದು ಅಹಮ್ಮದ ನಗರಕ್ಕೆ ಮುತ್ತಿಗೆ ಹಾಕಿ ಅಲ್ಲಲ್ಲಿಯ ಮಹತ್ವದ ದ್ವಾರಗಳ ಬಳಿ ತಗ್ಗು ತೋಡಿ ಮದ್ದು ತುಂಬತೊಡಗಿದನು. ಈ ಸುದ್ದಿಯು ಚಾಂದಬೀಬಿಗೆ ತಿಳಿಯಲು ಮುರಾದನ ಪ್ರಯತ್ನವನ್ನು ನಿಷ್ಫಲಗೊಳಿಸಬೇಕೆಂದು ಯೋಚಿಸಿ ಅವರು ಮದ್ದು ತುಂಬಿದ ಸ್ಥಾನಗಳನ್ನು ಬರಿದು ಮಾಡತೊಡಗಿದಳು. ಮೂರನೆಯ ಸ್ಥಾನವನ್ನು ಬರಿದು ಮಾಡುತ್ತಿರುವಾಗ ಯಾರೋ ಕೊಳ್ಳಿ ಇಟ್ಟುಬಿಟ್ಟರು ತತ್ಪರಿಣಾಮವಾಗಿ ಅದು ಸ್ಫೋಟವಾಗಿ ಕೋಟೆಯ ಗೋಡೆ ಗೋಡೆಯಲ್ಲಿ ಬಿರುಕುಂಟಾಗಿಬಿಟ್ಟಿತು.

ಇದನ್ನು ನಿರೀಕ್ಷಿಸುತ್ತಿದ್ದ ಮೊಗಲರು ಸಣ್ಣ ಮಾರ್ಗವಾಗಿಯೇ ಕೋಟೆಯೊಳಗೆ ನುಗ್ಗಿದರು. ಚಾಂದಬೀಬಿಯು ಚಿಲಖತ್ತುಗಳನ್ನು ಧರಿಸಿ ರಣಚಂಡಿಯಂತೆ ಮೊಗಲರನ್ನು ತುಂಡರಿಸತೊಡಗಿದಳು. ತಮ್ಮ ಒಡತಿಯ ಶೌರ್ಯವನ್ನು ಕಂಡು ಸೈನಿಕರೂ ಶಕ್ತಿಮೀರಿ ಕಾದಿದರು. ಆದರೂ ಮೊಗಲರ ಅಪಾರ ಸೇನೆಯೆದುರು ನಿಲ್ಲುವದಾಗದೆ ಒಪ್ಪಂದ ಮಾಡಿಕೊಳ್ಳಬೇಕಾಯಿತು.

ಆದರೆ ಈ ಒಪ್ಪಂದವು ಮೊಗಲರಿಗೆ ಸಮಾಧಾನವನ್ನುಂಟುಮಾಡಲಿಲ್ಲ. ಮುಂದೆ ಅಕಬರನು ತನ್ನ ಇನ್ನೊಬ್ಬ ಮಗನಾದ ದಾನಿಯಲ

ನನ್ನು ಕಳುಹಿಸಿ ಆ ಕೋಟೆಯನ್ನು ವಶಮಾಡಿಕೊಂಡನು ಅದೇ ಯುದ್ಧದಲ್ಲಿ ಚಾಂದಬೀಬಿಯು ಮರಣ ಹೊಂದಿದಳು.

# ಅಕಬರ ಬಾದಶಹ !

ಹಿಂದೂ-ಮುಸಲ್ಮಾನರಲ್ಲಿ ಐಕ್ಯವನ್ನುಂಟುಮಾಡಬೇಕೆಂದು ಪ್ರಯತ್ನಿಸಿದವರಲ್ಲಿ ಮೊಗಲ ಚಕ್ರವರ್ತಿ ಅಕಬರನೂ ಒಬ್ಬನಾಗಿದ್ದಾನೆ ಈತನು ಭಾರತದಲ್ಲಿ ಮೊಗಲ ರಾಜ್ಯವನ್ನು ಸ್ಥಾಪಿಸಿದ ಬಾಬರನ ಮೊಮ್ಮಗನು.

ಬಾಬರನ ಮಗನಾದ ಹುಮಾಯೂನನು ರಾಜ್ಯವನ್ನು ಕಳೆದು ಕೊಂಡು ಹೆಂಡತಿಯೊಡನೆ ಅಲೆಯುತ್ತಿರುವಾಗ ಸಿಂಧದೊಳಗಿನ ಉಮರ ಕೋಟೆ ಎಂಬಲ್ಲಿ ಅಕಬರನು ಜನಿಸಿದನು. ಮಗನು ಹುಟ್ಟಿದಾಗ ಹಂಚ ಲು ಏನೂ ಇರದ ಮೂಲಕ ಹುಮಾಯೂನನು ಬಳಿಯಿದ್ದ ಕಸ್ತೂರಿ ಯನ್ನೇ ಹಂಚಿದನು. ಅದರ ಪರಿಮಳವು ಸುತ್ತಲೂ ಹರಡಿತು. ಆಗ ಹುಮಾಯೂನನು ಕಸ್ತೂರಿಯ ಪರಿಮಳವಂತೆ ನನ್ನ ಮಗನ ಪರಿಮಳವೂ ಎಲ್ಲೆಡೆಗೆ ಹರಡಲಿ ಎಂದು ದೇವರನ್ನು ಪ್ರಾರ್ಥಿಸಿದನು.

ಮರಳಿ ಹುಮಾಯೂನನು ರಾಜ್ಯವನ್ನು ದೊರಕಿಸುವವರೆಗೆ ಅಕ ಬರನು ಕಷ್ಟದಲ್ಲಿಯೇ ಬೆಳೆಯಬೇಕಾಯಿತು ಈ ರೀತಿಯಾಗಿ ಹುಮಾ ಯೂನನು ಸತ್ತನಂತರ ಅಕಬರನು ಪಟ್ಟಕ್ಕೆ ಬಂದಾಗ ಕೇವಲ ದಿಲ್ಲಿ-ಆಗ್ರಾ ಇವೆರಡು ಪಟ್ಟಣಗಳು ಮಾತ್ರ ಮೊಗಲರ ಅಧೀನದಲ್ಲಿದ್ದವು. ಆಗ ಅಕಬರನು ಹದಿಮೂರು ವರ್ಷದವನಿದ್ದುದರಿಂದ ಸರದಾರನಾದ ಬೈರಾ ಮಖಾನನೇ ಅಧಿಕಾರವನ್ನು ನಡೆಯಿಸುತ್ತಿದ್ದನು.

ಮುಂದೆ ಬೈರಾಮಖಾನನೇ ಕೆಲವೊಂದು ಯುದ್ಧಗಳನ್ನು ಗೆದ್ದು ರಾಜ್ಯವನ್ನು ಬೆಳೆಯಿಸಿದನು. ಆದರೆ ಆವನ ಸರ್ವಾಧಿಕಾರೀ ಆಡಳಿತವು

ಅಕಬರನಿಗೆ ಪರಿಬಾರದ್ದರಿಂದ ತಾನೇ ರಾಜ್ಯಸೂತ್ರವನ್ನು ವಹಿಸಿಕೊಂಡು ಅವನನ್ನು ಮಕ್ಕೆಗೆ ಕಳಿಸಿದನು ಆದರೆ ಸಿಟ್ಟಿಗೆದ್ದ ಅವನು ಮಕ್ಕೆಗೆ ಹೋಗದೆ ಒಂದು ಸೈನ್ಯವನ್ನು ಕಟ್ಟಿ ಅಕಬರನೊಂದಿಗೆ ಯುದ್ಧಕ್ಕೆ ನಿಂತನು ಅಕಬರನು ಅವನನ್ನು ಯುದ್ಧದಲ್ಲಿ ಸೋಲಿಸಿದರೂ ಕೊಲ್ಲದೆ ಮತ್ತೆ ಮಕ್ಕೆಗೆ ಹೋಗಲು ಅಸ್ಪದವಿತ್ತನು. ಆದರೆ ಮಾರ್ಗದಲ್ಲಿಯೇ ಅವನ ಕೊಲೆಯಾಯಿತು.

ಈ ರೀತಿಯಾಗಿ ರಾಜ್ಯದ ಹೊಣೆಯನ್ನು ಹೊತ್ತ ಅಕಬರನು ಎಲ್ಲರಿಗೂ ಪ್ರಿಯವಾಗುತ್ತ ನಡೆದುಕೊಂಡನು ಹಿಂದೂ-ಮುಸಲ್ಮಾನರಲ್ಲಿಯ ದ್ವೇಷವನ್ನು ಇಲ್ಲವಾಗಿಸಲು ಅವರವರಲ್ಲಿ ಶರೀರಸಂಬಂಧವನ್ನು ಪ್ರಾರಂಭಮಾಡಿಸಿದನು. ಆ ರೀತಿಯ ಮೊದಲ ಹೆಜ್ಜೆಯನ್ನು ತಾನೇ ಇರಿಸಿದನು ಅಂದರೆ ಸರದಾರರ ಕನ್ಯೆಯರನ್ನು ಮೊದಲು ತಾನೇ ಮದುವೆಯಾಗಿ ಇತರರಿಗೆ ಪಾಠ ಹಾಕಿಕೊಟ್ಟನು

ಅಲ್ಲದೆ ಅಕಬರನು ಕಲಾಪ್ರೇಮಿಯೂ, ವಿದ್ಯಾಪ್ರೇಮಿಯೂ ಆಗಿದ್ದನು. ತಾನಸೇನರಂಥ ಸಂಗೀತಗಾರರೂ, ಅಬುಲ್‌ಫಜಲ್, ಫೈಜಿಯಂಥ ವಿದ್ವಾಂಸರೂ, ತೋಡರಮಲ್ಲನಂಥ ಕುಶಲ ಆಡಳಿತಗಾರರೂ, ಮಾನಸಿಂಗನಂಥ ಸ್ವಾಮಿನಿಷ್ಠ ಕಲಿಗಳೂ, ಬೀರಬಲ್ಲನಂಥ ಹಾಸ್ಯಶಿರೋಮಣಿಯೂ ಅವನ ಬಳಿ ಇದ್ದು ನವರತ್ನಗಳೆಂದು ಹೆಸರು ಪಡೆದಿದ್ದರು.

ಅಕಬರನ ಸ್ವಭಾವವು ಹೀಗೆಯೇ ಇತ್ತು ಎಂದು ಹೇಳುವದು ಅಸಾಧ್ಯ. ಆದರೂ ಯಾವುದೊಂದು ಕೆಲಸ ಮಾಡುವಾಗ ಆ ಬಗ್ಗೆ ದೂರದೃಷ್ಟಿಯ ವಿಚಾರ ಮಾಡುತ್ತಿದ್ದನೆಂಬುದು ಮಾತ್ರ ನಿಜ. ಕೊನೆಯವರೆಗೂ ಅದನು ತಾಯಿಯ ಮಾತನ್ನು ಮೀರಿ ನಡೆಯಲಿಲ್ಲ. ಮಾತೃದೇವೋಭವವೇ ಅವನ ತಾರಕ ಮಂತ್ರವಾಗಿತ್ತು.

ಈ ರೀತಿ ಸಕಲೈಶ್ವರ್ಯಗಳನ್ನು ಕಂಡ ಅಕಬರನ ಕೊನೆಯ ದಿನಗಳು ಮಾತ್ರ ಬಹಳ ದುಃಖದೊಂದಿಗೆ ಮುಕ್ತಾಯವಾದವು.



# ೨ ನೇ ಪುಲಿಕೇಶಿ

ಕರ್ನಾಟಕದ, ಕನ್ನಡ ನಾಡಿನ ವಿಜಯ ಪತಾಕೆಯನ್ನು ದಿಕ್-ದಿಗಂತದವರೆಗೆ ಹಾರಿಸಿದ ಕೆಲವೇ ಕನ್ನಡ ಕಡುಗಲಿಗಳಲ್ಲಿ ೨ ನೇ ಪುಲಿಕೇಶಿಯು ಅಗ್ರೇಸರನಾಗಿದ್ದಾನೆಂದೇ ಹೇಳಬೇಕು,

ಈತನು ಚಾಲುಕ್ಯ ವಂಶದವನು. ಚಾಲುಕ್ಯರ ರಾಜ್ಯಕ್ಕೆ ಬದಾಮಿಯು ರಾಜಧಾನಿಯಾಗಿದ್ದಿತು. ೨ ನೇ ಪುಲಿಕೇಶಿಯು ಚಿಕ್ಕವನಿದ್ದಾಗ ಆವನಿಂದ ರಾಜ್ಯವನ್ನು ಕಸಿದುಕೊಂಡು ತಾನೇ ಅರಸನಾಗಬೇಕೆಂದು ಅವನ ಕಕ್ಕನು ಯೋಚಿಸಿ, ಅಧಿಕಾರ ಸೂತ್ರಗಳನ್ನು ತನ್ನ ಕೈಯಲ್ಲಿಯೇ ತೆಗೆದುಕೊಂಡನು. ಮುಂದೆ ೨ ನೇ ಪುಲಿಕೇಶಿಯು ಉಪಾಯದಿಂದ ರಾಜ್ಯವನ್ನು ಅವನ ಕೈಯಿಂದ ಜಡಿಸಿ ಸೂತ್ರವನ್ನು ತಾನೇ ವಹಿಸಿದನು.

ಬದಾಮಿಯ ಸಿಂಹಾಸನವನ್ನೇರಿದ ನಂತರ ೨ ನೇ ಪುಲಿಕೇಶಿಯು ತನ್ನ ಸೈನ್ಯಬಲವನ್ನು ಹೆಚ್ಚಿಸಿಕೊಂಡು, ಮೊದಲು ಕನ್ನಡಿಗರೇ ಆದ ಕದಂಬ, ಗಂಗ ಮೊದಲಾದ ಅರಸರನ್ನು ಗೆದ್ದನು. ಆಮೇಲೆ ಪಾಂಡ್ಯ, ಪಲ್ಲವ, ಚೋಳ ಮುಂತಾದವರನ್ನು ಗೆದ್ದುದಲ್ಲದೆ, ಗೋದಾವರಿಯಿಂದ ದಕ್ಷಿಣದ ವರೆಗಿನ ಎಲ್ಲ ರಾಜ್ಯಗಳನ್ನೂ ಗೆದ್ದು, ಅವುಗಳ ಮೇಲೆ ತನ್ನ ತಮ್ಮನಾದ ವಿಷ್ಣುವರ್ಧನನನ್ನು ಮಾಂಡಲೇಶ್ವರನನ್ನಾಗಿ ಮಾಡಿದನು.

ಪುಲಿಕೇಶಿಯು ಪರಾಕ್ರಮು, ರಾಜ್ಯವಿಸ್ತರಣೆಯ ಬಗೆಗೆ ಹೇಳುವಾಗ ಇವನಿಗೆ ದಕ್ಷಿಣದಲ್ಲಿ ಬದಾಮಿಯು ರಾಜಧಾನಿಯಿದ್ದಂತೆ ಉತ್ತರದಲ್ಲಿ ನಾಶಿಕವು ರಾಜಧಾನಿಯಿದ್ದಿತೆಂದು ಹೇಳಿದರೆ ಸಾಕಾಗಬಹುದು. ನೌಕಾ ಯುದ್ಧವನ್ನೂ ಪುಲಿಕೇಶಿಯು ಮಾಡಿದ್ದಾನೆ

ಕನೋಜದ ಅರಸನಾದ ಹರ್ಷವರ್ಧನನನ್ನು ೨ ನೇ ಪುಲಿಕೇಶಿಯು ಸೋಲಿಸಿದ್ದು, ಪುಲಿಕೇಶಿಯ ವಿಜಯವಲ್ಲ, ಕನ್ನಡಿಗರ ವಿಜಯವೆಂದೇ ಹೇಳಬೇಕು, ದಕ್ಷಿಣದ ಮೇಲೆ ದಿಗ್ವಿಜಯ ಯಾತ್ರೆ ಮಾಡಬೇಕೆಂದು ಹೊರಟ ಹರ್ಷವರ್ಧನನನ್ನು ೨ ನೇ ಪುಲಿಕೇಶಿಯು ನರ್ಮದೆಯ ತೀರದ ಬಳಿ ಸಂಧಿಸಿ ಯುದ್ಧಕ್ಕಣಿಯಾದನು. ಆ ಸಮಯದಲ್ಲಿ ಕನ್ನಡ ಕಲಿಗಳು ತೋರಿದ ಪರಾಕ್ರಮವು ಕನ್ನಡಿಗರ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂಥದಾಗಿತ್ತು ದಕ್ಷಿಣವನ್ನು ಗೆಲ್ಲಬೇಕೆಂದು ಹೊರಟ

ಹರ್ಷವರ್ಧನನು ತನ್ನ ರಾಜ್ಯವನ್ನು ತಲುಪಬೇಕಾದರೆ ಸಾಕುಬೇಕಾಯಿತು. ಮತ್ತೆಂದೂ ದಕ್ಷಿಣದ ನೆನಪು ತೆಗೆಯಬಾರದ ಹಾಗೆ ಕನ್ನಡಿಗರು ಅವನಿಗೆ ಹಾಗೂ ಅವನ ಸೈನ್ಯಕ್ಕೆ ಬುದ್ಧಿಯನ್ನು ಕಲಿಸಿದರು.

ದಕ್ಷಿಣ ಭಾರತದ ಏಕಮೇವ ಸಮ್ರಾಟನಾದ ೨ ನೇ ಪುಲಿಕೇಶಿಯು "ಪರಮೇಶ್ವರ"ನೆಂಬ ಬಿರುದನ್ನೂ ಧರಿಸಿದನು. ಈತನ ಖ್ಯಾತಿಯು ಹಿಂದುಸ್ತಾನದಲ್ಲಷ್ಟೇ ಅಲ್ಲ, ವಿದೇಶಗಳಿಗೂ ತಲುಪಿತ್ತು. ಇರಾಣದ ಅರಸನು ಈತನ ಖ್ಯಾತಿಯನ್ನು ಕೇಳಿ ಸಖ್ಯ ಬೆಳೆಯಿಸಬೇಕೆಂಬ ಉದ್ದೇಶದಿಂದ ತನ್ನ ರಾಯಭಾರಿಯನ್ನು ಕಳುಹಿಸಿದ್ದನು. ಚೀನದಿಂದ ಪ್ರವಾಸ ಮಾಡುತ್ತ ಭಾರತಕ್ಕೆ ಬಂದಿದ್ದ ಹುವೆನ್‌ತ್ಸಂಗನೆಂಬ ಪ್ರವಾಸಿಯು ಕೂಡ ೨ ನೇ ಪುಲಿಕೇಶಿಗೆ ಭೆಟ್ಟಿಯಾಗಿದ್ದನಲ್ಲದೆ, ಅವನ ರಾಜ್ಯದಾಡಳಿತೆ, ಅವನ ರಾಜ್ಯದ ವಿಸ್ತಾರ ಮತ್ತು ಕನ್ನಡ ನಾಡಿನಲ್ಲಿಯ ಆಗಿನ ಜನಜೀವನದ ಬಗ್ಗೆ ಮನಮೆಚ್ಚುವಂತೆ ಬರೆದಿದ್ದಾನೆ.



# ಮಹಾರಾಣಿ ಲಕ್ಷ್ಮೀಬಾಯಿ !

ನಮಗೆ ಸ್ವಾತಂತ್ರ್ಯ ದೊರೆತುದು ೧೯೪೭ ನೇ ಇಸ್ವಿಯಲ್ಲಾದರೂ ನಮ್ಮ ಸ್ವಾತಂತ್ರ್ಯ ಯುದ್ಧವು ಪ್ರಾರಂಭವಾದುದು ೧೮೫೭ ರಲ್ಲಿ ಎಂಬುದನ್ನು ಯಾವ ಭಾರತೀಯನೂ ಮರೆಯಲಾರನು ಆ ಸಮಯದಲ್ಲಿ ಇಡೀ ಭಾರತವು ಬೆಂಕಿಯ ಸಮೀಪದಲ್ಲಿದ್ದ ಮದ್ದಿನಾಗರದಂತಿತ್ತು. ಯಾವ ಸಮಯಕ್ಕೆ ಏನಾಗುವದೆಂಬುದನ್ನು ಹೇಳಲು ಯಾರಿಂದಲೂ ಸಾಧ್ಯವಿದ್ದಿಲ್ಲ.

ಆ ಸಮಯದಲ್ಲಿ ಭಾರತದೊಳಗಿನ ಬಹುಶಃ ಎಲ್ಲ ಸಂಸ್ಥಾನಗಳು ಬ್ರಿಟಿಶರ ಆಡಳಿತಕ್ಕೊಳಪಟ್ಟವು ಆ ರೀತಿ ಸಂಸ್ಥಾನಿಕರು ತಮ್ಮ ಅಧಿ

ಕಾರವನ್ನು ಇಂಗ್ಲೀಷರಿಗೊಪ್ಪಿಸುವ ಮುನ್ನ ಭಯಂಕರ ಕಾಳಗಗಳು ನಡೆದವು. ಅಂಥವುಗಳಲ್ಲಿ ಝಾಂಸಿಯ ಕದನವು ಅತಿ ಮುಖ್ಯವಾದುದಾಗಿದೆ. ಝಾಂಸಿಯ ಸಂಸ್ಥಾನವನ್ನು ಆಗ ಲಕ್ಷ್ಮೀಬಾಯಿಯು ಆಳುತ್ತಿದ್ದಳು ಅವಳಿಗೆ ಮಕ್ಕಳಿರದ್ದರಿಂದ ದತ್ತಕ ತೆಗೆದುಕೊಳ್ಳಲೆತ್ನಿಸಿದಳು. ಆ ಪ್ರಯತ್ನವು ಅವಳ ಪತಿಯು ಮೃತ್ಯುಶಯ್ಯೆಯಲ್ಲಿದ್ದಾಗಲೇ ನಡೆದಿತ್ತು ಆದರೆ ಕುಹಕತನದಲ್ಲಿ ಎತ್ತಿದ ಕೈ ಎನಿಸಿದ ಬ್ರಿಟಿಶರು ಅವಳು ದತ್ತಕ ತೆಗೆದುಕೊಂಡುದನ್ನು ನಾಮಂಜೂರು ಮಾಡಿ ಆ ರಾಜ್ಯವನ್ನು ತಮ್ಮ ಅಧೀನದಲ್ಲಿ ತೆಗೆದುಕೊಳ್ಳಲೆತ್ನಿಸಿದರು.

ಲಕ್ಷ್ಮೀಬಾಯಿಯು ಅವರ ಆಜ್ಞೆಯನ್ನು ತಿರಸ್ಕರಿಸಿದ್ದರ ಪರಿಣಾಮವಾಗಿ ಅವರೊಂದಿಗೆ ಹೋರಾಡಬೇಕಾಯಿತು ತನ್ನ ಜೀವನದ ಕೊನೆಯುಸಿರಿನವರೆಗೂ ಹೋರಾಡಿದ ಆ ವೀರಾಗ್ರಣಿ ಮಹಿಳೆಯು ಕಾದುತ್ತಲೆ ಅಸುವನ್ನು ನೀಗಿದಳು

ಲಕ್ಷ್ಮೀಬಾಯಿಯ ಮೊದಲಿನ ಹೆಸರು ಮನೂತಾಯಿ ಎಂಬುದು ಅವಳ ಬಾಲ್ಯವೆಲ್ಲ ಆರ್ಯಾವರ್ತದಲ್ಲಿ ಶ್ರೀಮಂತ ಪುತ್ರರೊಂದಿಗೇ ಕಳೆಯಿತು. ಅವಳು ತೀರ ಚಿಕ್ಕವಳಿದ್ದಾಗ ತಾಯಿಯು ತೀರಿಕೊಂಡದ್ದರಿಂದ ಅವಳ ತಂದೆಯಾದ ಮೋರೋಪಂತನು ಮತ್ತೊಂದು ಮದುವೆಯನ್ನು ಮಾಡಿಕೊಳ್ಳದೇ ಅವಳ ಲಾಲನೆ ಪಾಲನೆಯಲ್ಲಿ ಮನಸ್ಸು ಹಾಕಿದನು.

ವೀರರಿಗುಚಿತವಾದ ಅಂದರೆ ಕುದುರೆ ಏರುವದು, ಖಡ್ಗ ತಿರುವುವದು, ಈಜುವದೇ ಮುಂತಾದ ಶಿಕ್ಷಣಗಳು ಅವಳಿಗೆ ಬಾಲ್ಯದಲ್ಲಿಯೇ ಶ್ರೀಮಂತ ಪುತ್ರರೊಂದಿಗೆ ದೊರೆತವು. ಮಹತ್ವಾಕಾಂಕ್ಷಿಯಾದ ಮನೂತಾಯಿಯು ಗಂಡು ಮಕ್ಕಳೊಂದಿಗೆ ಗಂಡು ಹುಡುಗನಾಗಿಯೇ ಬೆಳೆದಳು. ಅವಳ ವಿವಾಹವು ಝಾಂಸಿಯ ಗಂಗಾಧರಪಂತನೊಂದಿಗಾದಾಗ ಅವಳಿನ್ನೂ ಏನೂ ಅರಿಯದ ಹಸುಳೆಯಾಗಿದ್ದಳು ಆದರೂ ಅವಳಲ್ಲಿ ಆ ವಯಸ್ಸಿಗೂ ಮಿಕ್ಕಿದ ಗಾಂಭೀರ್ಯವು ಅಡಕವಾಗಿತ್ತು.

ಪಂತನನ್ನು ಮದುವೆಯಾಗಿ ಝಾಂಸಿಗೆ ಹೋದ ನಂತರ ಅವಳಿಗೆ ಲಕ್ಷ್ಮೀಬಾಯಿ ಎಂದು ನಾಮಕರಣ ಮಾಡಲಾಯಿತು. ನಿಜಕ್ಕೂ ಅವಳು ಝಾಂಸಿಯ ಪಾಲಿಗೆ ಲಕ್ಷ್ಮಿಯೇ ಆದಳು ಮುಂದೆ ದೊಡ್ಡವ ಳಾದ ನಂತರ ಒಂದು ಮಗು ಜನಿಸಿತು. ಆದರೆ ಆ ಮಗು ಬಹು ಕಾಲ ಜೀವಿಸದೆ ಅಲ್ಪಾವಧಿಯಲ್ಲಿಯೇ ತೀರಿಹೋಯಿತು ಮಗುವಿನ ಮರ ಣವು ಅವಳ ಪತಿ ಗಂಗಾಧರ ಪಂತನ ಮನಸ್ಸಿನ ಮೇಲೆ ಒಳ್ಳೇ ಆಘಾತ ವನ್ನುಂಟುಮಾಡಿತು.

ಮೊದಲೇ ವಯಸ್ಕನಾದ ಪಂತನು ಹಾಸುಗೆ ಹಿಡಿದುಬಿಟ್ಟನು. ಮಗನು ತೀರಿಕೊಂಡ ಚಿಂತೆ, ಪತಿಯು ಹಾಸುಗೆ ಹಿಡಿದ ಚಿಂತೆ ಇವುಗಳ ಮಧ್ಯ ಸಿಲುಕಿ ಲಕ್ಷ್ಮೀಬಾಯಿಯು ಝರ್ಝರಿತಳಾಗಿಬಿಟ್ಟಳು. ಆದರೂ ಅವಳು ಧೈರ್ಯಗೆಡದೆ ಪತಿಯ ಆರೈಕೆಯಲ್ಲಿ ತೊಡಗಿದಳು. ತಾನಿನ್ನು ಬದುಕುವದು ಸಾಧ್ಯವಿಲ್ಲವೆಂಬುದನ್ನರಿತ ಪಂತನು ತನ್ನ ಆಪ್ತರಲ್ಲೊಬ್ಬನ ಮಗನಾದ ದಾಮೋದರನೆಂಬವನನ್ನು ದತ್ತಕ ತೆಗೆದುಕೊಳ್ಳಲು ಲಕ್ಷ್ಮೀ ಬಾಯಿಗೂ, ಮೇಜರ ಎಲಿಸ್‌ನಿಗೂ ತಿಳಿಸಿ ೧೮೫೩ ರ ನವ್ಹಂಬರ ೨೧ ರ ಮಧ್ಯಾಹ್ನ ಸ್ವರ್ಗಸ್ಥನಾದನು.

ಮುಂದೆ ಕಂಪೆನಿ ಸರಕಾರವು ದತ್ತಕ ತೆಗೆದುಕೊಳ್ಳಲು ಬರುವಂತಿ ಲ್ಲವೆಂದು ಸಾರಿದರೂ ರಾಣಿಯು "ಮೇರಿ ಝಾಂಸಿ ನಹೀ ದೂಂಗಿ" ಎಂದು ಘೋಷಿಸಿ ಕಂಪೆನಿ ಸರಕಾರದ ಆಜ್ಞೆಯನ್ನು ಅಲ್ಲಗಳೆದಳು. ಅದೇ ಸಮಯಕ್ಕೆ ಭಾರತದ ತುಂಬೆಲ್ಲ ಸ್ವಾತಂತ್ರ್ಯ ಯುದ್ಧವು ಸಾರಲ್ಪಟ್ಟಿತು. (೧೮೫೭ ಮೇ) ಆ ಕಿಡಿಗಳು ಝಾಂಸಿಗೂ ತಲುಪಿದವು

ಮೇಜರ ಹ್ಯೂರೋಜನು ಅಸದಳ ಸೈನ್ಯದೊಂದಿಗೆ ಬಂದು ಝಾಂಸಿಗೆ ಮುತ್ತಿಗೆಯನ್ನು ಹಾಕಿದನು ಲಕ್ಷ್ಮೀಬಾಯಿಯು ಸಮಗ್ರ ಮೂರು ತಿಂಗಳವರೆಗೆ ಅವನೊಂದಿಗೆ ಹೋರಾಡಿದಳು. ಕೆಲ ವಿಶ್ವಾಸ ಘಾತುಕರು ಮಾಡಿದ ಮೋಸದಿಂದಾಗಿ ಅವಳು ದತ್ತಕಮಗ ದಾಮೋದರ ನನ್ನು ಬೆನ್ನಿಗೆ ಕಟ್ಟಿಕೊಂಡು ರಾತ್ರಿಯ ಸಮಯದಲ್ಲಿ ಝಾಂಸಿಯನ್ನು ಬಿಡಬೇಕಾಯಿತು.

ಇದನ್ನರಿತ ಇಂಗ್ಲೀಷರೂ ಅವಳ ಬೆನ್ನಟ್ಟಿದರು ಮುಂದೆ ಮಾರ್ಗದಲ್ಲಿ ಹಳ್ಳವೊಂದು ಅಡ್ಡಬಂದು ಅವಳು ವೈರಿಗಳ ಕೈಗೆ ಸಿಕ್ಕಬೇಕಾಗಿ ಬಂದರೂ ಅವರೊಡನೆ ಕಾದಿದಳು. ನೆಲಕ್ಕೆ ಬೀಳುವ ಸಮಯದಲ್ಲಿ ಬೇರೆ ಕೆಲವು ಸ್ವಾತಂತ್ರ್ಯ ವೀರರು ಅವಳ ಸಹಾಯಕ್ಕೆ ಬಂದರು. ಈ ರೀತಿ ಲಕ್ಷ್ಮೀಬಾಯಿಯು ಎಲ್ಲಿಯೋ ಹುಟ್ಟಿ ರಾಣಿಯಾಗಿ, ಕಲಿತನದಿಂದ ಕಾದಿ ಆಶ್ರಮದಲ್ಲಿ ಮರಣ ಹೊಂದಿದಳು. ಇಂಥ ವೀರ ರತ್ನಗಳನ್ನು ಹೆತ್ತ ಭಾರತ ಮಾತೆ ಧನ್ಯಳು.






ಲೇಖಕ:- ಎಂ. ಜೀವನ.

ಮುದ್ರಕರು :- ಪಿ. ಜಿ. ಮಾಗಡಿ

ಮಲ್ಲಿಕಾರ್ಜುನ ಪ್ರಿಂಟಿಂಗವರ್ಕ್ಸ, ದುರ್ಗದಬೈಲು, ಹುಬ್ಬಳ್ಳಿ.

ಪ್ರಕಾಶಕರು :- ಎ. ಎಮ್. ಕರಡಿ, ಬುಕ್‌ಸೇಲರ ಸ್ಟೇಶನ ರೋಡ ಹುಬ್ಬಳ್ಳಿ.

ಬೆಲೆ ೧೯೫೫ ೬ ಆಣೆ

## —: ನಮ್ಮ ಪ್ರಕಟನೆಗಳು :—

## ಆರು ಆಣೆ ಬೆಲೆಗಳ ಪುಸ್ತಕಗಳು

**ಏಕಾಂಕ ನಾಟಕಗಳು**

೧ ವೀರ ಅಭಿಮನ್ಯು
೨ ದಾನಶೂರ ಕರ್ಣ
೩ ರಾಮರಾಜ್ಯ
೪ ಯಾರತಪ್ಪು
೫ ನನ್ನಮರ್ಜಿ
೬ ಶಿಲ್ಕಿನ ಶೀರೆ
೭ ಬಿರುಗಾಳಿ.
೮ ಶೇರಿಗೆ ಸವ್ವಾಶೇರು
೯ ಗಂಟ್ಟಿನ ಪೆಟ್ಟು
೧೦ ಉತ್ತರ ಕುಮಾರ

**ಇತರ ಪುಸ್ತಕಗಳು**

೧೧ ಹಳ್ಳಿಯ ಹಾಡು
೧೨ ಲಾವಣಿ ಪದಗಳು
೧೩ ಸಿನಿಮಾ ಕನ್ನಡಹಾಡು
೧೪ ಬ್ರಹ್ಮಾನಂದ ಭಜನೆ.
೧೫ ಕಬೀರ ದಾಸರ ಭಜನೆ
೧೬ ಪುರಂದರ ದಾಸರ ಭಜನೆ
೧೭ ನಗೆ ಬರಹಗಳು
೧೮ ಸ್ತ್ರೀ ನೀತಿ ಬೋಧೆ
೧೯ ವನಿತೆಯರ ಮಂಗಳಹಾಡು
೨೦ ದಂಪತಿ ಒಗಟುಗಳು
೨೧ ಸಾಯಿಬಾಬಾ ಚರಿತ್ರೆ
೨೨ ನೀತಿ ಕಥಾವಳಿ
೨೩ ಚಮತ್ಕಾರ ಕಥೆಗಳು
೨೪ ಕೈಚಳಕ ವಿದ್ಯಾ ರಹಸ್ಯ
೨೫ ಶಿವಭಕ್ತರ ಕಥೆಗಳು
೨೬ ಐತಿಹಾಸಿಕ ಮಹಾ ವ್ಯಕ್ತಿಗಳು
೨೭ ಹಿತೋಪದೇಶ
೨೮ ಮನೋರಂಜಕ ಕಥೆಗಳು
೨೯ ನಿರುದ್ಯೋಗನಿವಾರಣೆ
೩೦ ಆರುಭಾಷಾ ಶಿಕ್ಷಕ.
೩೧ ಶ್ರೀ ಕ್ಷೇತ್ರ ಉಳವಿ ಮಹಾತ್ಮೆ
೩೨ ಶ್ರೀ ಕ್ಷೇತ್ರ ಗೋಕರ್ಣ ಮಹಾತ್ಮೆ
೩೩ ಮೂರ್ಖದರ್ಶನ
೩೪ ಶಿವರಾತ್ರಿ ಮಹಿಮೆ
೩೫ ಭಗವದ್ಗೀತಾ.
೩೬ ಶನಿದೇವರ ಮಹಾತ್ಮೆ
೩೭ ಪ್ರಶ್ನ ಚಿಂತಾಮಣಿ
೩೮ ವರ್ಷ ಭವಿಷ್ಯ.
೩೯ ವೆಂಕಟೇಶ ಮಹಾತ್ಮೆ
೪೦ ರೇಣುಕಾ ಮಹಾತ್ಮೆ
೪೧ ಹರಿ ಭಕ್ತರ ಕಥೆಗಳು
೪೨ ಭಾರತದ ಕರ್ಮಯೋಗಿಗಳು

**ಕಾಮಶಾಸ್ತ್ರದ ಪುಸ್ತಕಗಳು**

೪೩ ಸುಖ ಸಂಸಾರ
೪೪ ದಾಂಪತ್ಯ ಪ್ರೇಮ
೪೫ ಪುತ್ರ ಸಂತಾನ
೪೬ ಕೋಕ ಶಾಸ್ತ್ರ
೪೭ ರತಿ ವಿಲಾಸ
೪೮ ಏಕಾಂತ ಸುಖ
೪೯ ನಿದ್ರಾ ವಿಲಾಸ
೫೦ ಕಾಮಶಾಸ್ತ್ರದ ಗುಟ್ಟು
೫೧ ಪೌರುಷ ಸಾಧನೆ
೫೨ ಸುಖ ಪ್ರಸೂತಿ
೫೩ ಬ್ರಹ್ಮಚರ್ಯ
೫೪ ಮದುವೆ
೫೫ ಪ್ರಥಮ ರಾತ್ರಿ
೫೬ ಆಸನಗಳು

**ಸಿಗುವಸ್ಥಳ— ಎ. ಎಮ್. ಕರಡಿ ಬುಕ್ ಸೇಲರ ಹುಬ್ಬಳ್ಳಿ.**

**ಪ್ರಕಾಶಕರು — ಎ. ಎಮ್. ಕರಡಿ, ಬುಕ್ ಸೇಲರ, ಹುಬ್ಬಳ್ಳಿ.**
**ಮುದ್ರಕರು: ಪಿ. ಜಿ. ಮಾಗಡಿ ಮಲ್ಲಿಕಾರ್ಜುನ ಪ್ರಿಂಟಿಂಗ್ ವರ್ಕ್ಸ ಹುಬ್ಬಳ್ಳಿ**

(ಊ) ವಿಶ್ವವಿದ್ಯಾನಿಲಯದಲ್ಲಿ ಕಲಿಯುವವರಿಗೆ ...............ಯ ವ್ಯವಸ್ಥೆಯನ್ನಿಟ್ಟಿದ್ದನು.

(ಎ) ಇವನ ಕಾಲದಲ್ಲಿ..............ಎಂಬಲ್ಲಿ..................ಎಂಬ ಮತ್ತೊಬ್ಬ ದೊಡ್ಡ ಕವಿಯು ಆಗಿಹೋದನು.

(ಏ) ಪಂಪನು................ಪನ್ನೂ................ಪನ್ನೂ............ ಭಾಷೆಯಲ್ಲಿ ಬರೆದನು.

(ಐ) ಪಂಪನಿಗೆ...............ನೆಂಬೂ ಕರೆಯುತ್ತಾರೆ.

# ೮. ಆದಿಪಂಪ

ಇವನ ಪೂರ್ವಜರು ಬಳ್ಳಾರಿ ಕಡೆಯವರು. ಇವನ ತಂದೆ ಅಭಿರಾಮ ದೇವನು. ಹೊಟ್ಟೆ ಹೊರಕೊಳ್ಳಲು ಲಕ್ಷ್ಮೇಶ್ವರಕ್ಕೆ ಬಂದು ಅಲ್ಲಿಯೇ ನೆಲೆಸಿ ದನು. ಲಕ್ಷ್ಮೇಶ್ವರಕ್ಕೆ ಆಗ ಪುಲಿಗೆರೆಯೆಂದು ಕರೆಯುತ್ತಿದ್ದರು. ಅಲ್ಲಿ ಚಾಲುಕ್ಯರ ವಂಶದ ಅರಿಕೇಸರಿ ಎಂಬ ಅರಸನು ಆಳುತ್ತಿದ್ದನು. ಆಗ ದೇವೇಂದ್ರಮುನಿ ಎಂಬವರು ಜೈನ ಮತದಲ್ಲಿ ಒಳ್ಳೇ ವಿದ್ವಾಂಸರೆಂದು ಹೆಸರಾಗಿದ್ದರು. ಅಭಿರಾಮದೇವನು ತನ್ನ ಮಗ ಪಂಪನನ್ನು ಅವರ ಬಳಿ ಯಲ್ಲಿ ವಿದ್ಯಾಭ್ಯಾಸಕ್ಕಾಗಿ ಇಟ್ಟನು. ಪಂಪನು ಬಲು ಚುರುಕು ಬುದ್ಧಿ ಯವನೂ ಒಳ್ಳೆಯ ಸ್ವಭಾವದವನೂ ಇದ್ದನು. ಇದರಿಂದ ಅವನು ಗುರು ಗಳಿಗೆ ಪ್ರೀತಿಯ ಶಿಷ್ಯನಾಗಿದ್ದನು. ಮುನಿಗಳು ಅರಿಕೇಸರಿಯ ಗುರುಗಳಾಗಿ ದ್ದರು. ಒಂದು ದಿನ ಮಾತಿಗೆ ಮಾತು ಹೊರಟಾಗ, ಮುನಿಗಳು ಅರಿಕೇಸರಿಗೆ ಪಂಪನ ವಿದ್ಯಾಬುದ್ಧಿಗಳ ಬಗೆಗೂ ಸ್ವಭಾವದ ಬಗೆಗೂ ಹೇಳಿದ್ದರು. ಕಲಿ ಯುವದೆಲ್ಲ ಮುಗಿದ ಮೇಲೆ ಪಂಪನು ಬನವಾಸಿಯಲ್ಲಿ ಬಹುದಿನ ಇದ್ದನು. ವಿದ್ವಾಂಸನಿದ್ದಷ್ಟು ಶೂರನೂ ಆಗಿದ್ದನು. ಕೆಲವು ಯುದ್ಧಗಳನ್ನಾಡಿ ಅನು ಭವವನ್ನು ಪಡೆದಿದ್ದನು.

ಅರಿಕೇಸರಿಯು ಬನವಾಸಿಯ ನಾಡನ್ನು ಗೆದ್ದನು. ಆಗ ಅರಿಕೇಸ ರಿಗೂ ಪಂಪನಿಗೂ ಸ್ನೇಹವಾಗಿ ಅದು ದಿನದಿನಕ್ಕೆ ಬೆಳೆಯುಹತ್ತಿತು. ಪಂಪನ ವಿದ್ಯಾಬುದ್ಧಿಗಳಿಗೂ ಗುಣಗಳಿಗೂ ಮೆಚ್ಚಿ ಅರಸನು ಅವನಿಗೆ ರಾಜಾಶ್ರಯ

ವನ್ನು ಕೊಟ್ಟನು. ಅರಸನ ಮೆಚ್ಚುಗೆಯನ್ನು ಪಡೆಯಲು ಅವನನ್ನು ವರ್ಣಿಸುವ 'ವಿಕ್ರಮಾರ್ಜುನ ವಿಜಯ' ಎಂಬದೊಂದು ಉತ್ತಮ ಕಾವ್ಯವನ್ನು ಕನ್ನಡದಲ್ಲಿ ಬರೆದಿದ್ದಾನೆ. ಅದನ್ನೋದಿದವರೆಲ್ಲರೂ ಅವನ ಪಾಂಡಿತ್ಯಕ್ಕೆ ತಲೆದೂಗುತ್ತಾರೆ. 'ಆದಿ ಪುರಾಣ' ಎಂಬ ಗ್ರಂಥವನ್ನೂ ಬರೆದಿದ್ದಾನೆ. ಬನವಾಸಿಯು ಬಲು ಸೊಗಸಿನ ನಾಡು. ಅಲ್ಲಿಯ ಸೃಷ್ಟಿಸೌಂದರ್ಯವನ್ನು ಬಹು ಸೊಗಸಾಗಿ ಬಣ್ಣಿಸಿದ್ದಾನೆ. ಪುಲಿಗೆರೆಯಲ್ಲಿದ್ದಾಗ ಮೇಲಿಂದ ಮೇಲೆ ಬನವಾಸಿಯನ್ನೂ ಅದರ ಸುತ್ತುಮುತ್ತಲಿನ ಸೌಂದರ್ಯವನ್ನೂ ನೆನೆನೆನಿಸಿ



ಮಹಾಕವಿ ಆದಿ ಪಂಪ

ಹಾಡಿಕೊಂಡಿರುವನು. ಮುಂದಿನ ಜನ್ಮದಲ್ಲಿ ತನ್ನನ್ನು ಆ ನಾಡಿನಲ್ಲಿ ಮರಿ ದುಂಬಿಯಾಗಿ ಇಲ್ಲವೆ ಕೋಗಿಲೆಯಾಗಿ ಹುಟ್ಟಿಸಬೇಕೆಂದು ದೇವರಿಗೆ ಬೇಡಿಕೊಂಡಿದ್ದಾನೆ! ಅವನು ನಿಜವಾಗಿ ದೊಡ್ಡ ಕವಿಯು. ಆದುದರಿಂದ ಅವನಿಗೆ 'ಮಹಾಕವಿ ಪಂಪ' ಎಂದೂ ಕರೆಯುತ್ತಾರೆ. ಮುಂದೆ ಮತ್ತೊಬ್ಬ ಅಭಿನವ ಪಂಪನೆಂಬ ಕವಿಯು ಆದುದರಿಂದ ಇವನಿಗೆ 'ಆದಿ ಪಂಪ' ಎಂದು ಕರೆಯುವ ರೂಢಿಯಿದೆ.

## ಅಭ್ಯಸನಗಳು

ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ಇವನ ತಂದೆಯ ಹೆಸರು............ನು.

(ಆ) ಈಗಿನ ಲಕ್ಷ್ಮೇಶ್ವರವು ಆಗಿನ.......... ಯು.

(ಇ) ಪಂಪನು..............ಎಂಬ ಗುರುಗಳ ಬಳಿಯಲ್ಲಿ ಅಭ್ಯಾಸ ಮಾಡಿದನು.

(ಈ) ಪುಲಿಗೆರೆಯ ಅರಸನ ಹೆಸರು...........ಯು.

(ಉ) ............ಯು ಪಂಪನಿಗೆ ರಾಜಾಶ್ರಯವನ್ನು ಕೊಟ್ಟನು.

(ಊ) ಪಂಪನು....................ಮತ್ತು....................ಎಂಬೆರಡು ಗ್ರಂಥಗಳನ್ನು ಬರೆದನು.

---

# ೯. ತೈಲಪ

ರಾಷ್ಟ್ರಕೂಟರ ಪುಣ್ಯ ತೀರಿತು. ಅವರಲ್ಲಿ ಮುಂದೆ ವೀರರು ಹುಟ್ಟಲಿಲ್ಲ. ಮಾಳವದ ಅರಸರು ರಾಷ್ಟ್ರಕೂಟರ ಬಹು ದಿನದ ಶತ್ರುಗಳು. ರಾಷ್ಟ್ರಕೂಟರಲ್ಲಿ ಯಾರೂ ಬಂಟರು ಹುಟ್ಟದ್ದನ್ನು ಕಂಡು ಮಾಳವದ ಮುಂಜರಾಜನು ದೊಡ್ಡ ದಂಡಿನೊಡನೆ ಬಂದು ಮಳಖೇಡಕ್ಕೆ ಮುತ್ತಿಗೆ ಹಾಕಿದನು. ಕೋಟೆಯ ಗೋಡೆಗಳನ್ನೇರಿ ಕಾವಲುಗಾರರನ್ನು ಕೊಂದುಹಾಕಿ ಕೋಟೆಯ ಬಾಗಿಲುಗಳನ್ನು ತೆರೆಯಿಸಿ ದಂಡು ಸಹಿತವಾಗಿ ಒಳಗೆ ಹೊಕ್ಕನು. ಪಟ್ಟಣವನ್ನು ಪೂರ್ಣವಾಗಿ ಸುಲಿದು ಅರಮನೆಯನ್ನು ಹಾಳು ದೇಗುಲದಂತೆ ಮಾಡಿ ತನ್ನ ದೇಶಕ್ಕೆ ಮರಳಿ ಹೊರಟನು.

ಇದೇ ಕಾಲಕ್ಕೆ ಬಾದಾಮಿಯಲ್ಲಿ ಚಾಲುಕ್ಯರ ವಂಶದ ತೈಲಪನೆಂಬವನು ಆಳುತ್ತಿದ್ದನು. ರಾಷ್ಟ್ರಕೂಟರು ತಮ್ಮ ಹಿರಿಯರಿಂದ ಕಸಿದುಕೊಂಡ ರಾಜ್ಯವನ್ನು ತಿರುಗಿ ಸೆಳೆದುಕೊಳ್ಳಬೇಕೆಂದು ಅವನು ಹವಣಿಸುತ್ತಿದ್ದನು. ಮುಂಜರಾಜನು ಮಳಖೇಡವನ್ನು ಹಾಳುಗೆಡವಿದ ಸುದ್ದೀ ಕೇಳಿ ಇವನು ಕಿಡಿಕಿಡಿಯಾದನು. ತನ್ನ ಕೈಯಲ್ಲಿದ್ದಷ್ಟು ದಂಡನ್ನು ಕೂಡಿಸಿಕೊಂಡು ತನ್ನ ಬೆಂಬಲಕ್ಕೆ ಮತ್ತೆ ಕೆಲವು ಸರದಾರರನ್ನು ಇಟ್ಟುಕೊಂಡು ತನ್ನ ದೇಶಕ್ಕೆ ಆಗಲೇ ಮರಳಿ ಹೊರಟಿದ್ದ ಮುಂಜನನ್ನು ಬೆನ್ನಟ್ಟಿದನು. ಅವನು

ಮಳಖೇಡವನ್ನು ಸುಲಿದುಕೊಂಡು ಒಯ್ಯುತ್ತಿದ್ದ ಎಲ್ಲ ಧನಸಂಪತ್ತನ್ನು ದೋಚಿಕೊಂಡು ತಿರುಗಿ ಮಳಖೇಡಕ್ಕೆ ಬಂದನು. ಅಷ್ಟರೊಳಗೆ ರಾಜನಾಗಿದ್ದ ಕಕ್ಕಲನನ್ನು ಸೋಲಿಸಿ ಅವನ ಮಗಳಾದ ಜಾಕವ್ವೆಯನ್ನು ಮದುವೆಯಾದನು.

ಈಗ ಚಾಲುಕ್ಯರ ದೈವ ತೆರೆಯಿತು. ತೈಲಪನು ಇಷ್ಟಕ್ಕೇ ಸುಮ್ಮನಿರದೆ ಸವದತ್ತಿಯ ರಟ್ಟರನ್ನೂ ಕೊಂಕಣದ ಶಿಲಾಹಾರರನ್ನೂ ತಾನು ಹೇಳಿದಂತೆ ಕೇಳಲಿಕ್ಕೆ ಹಚ್ಚಿದನು. ಮುಂದೆ ತನ್ನ ರಾಜ್ಯವನ್ನು ಹಬ್ಬಿಸಬೇಕೆಂಬ ಲವಲವಿಕೆಯಿಂದ ಉತ್ತರದಲ್ಲಿಯ ಗುಜರಾಥ, ಮಾಳವ, ನೇಪಾಳದ ಅರಸರನ್ನೂ, ದಕ್ಷಿಣದಲ್ಲಿಯ ಚೇರ, ಚೋಳ ರಾಜರನ್ನೂ ಗೆದ್ದನು. ಮಾಳವದ ಮುಂಜರಾಜನ ಮೇಲೆ ಅವನ ಕಣ್ಣಿತ್ತು. ಅವನನ್ನು ಹೇಗಾದರೂ ಮಾಡಿ "ನಮೋ ನಮೋ" ಅನ್ನಿಸಿ ಬಿಡಬೇಕೆಂದು ನಿಶ್ಚಯಿಸಿದ್ದನು. ಅವನನ್ನು ಮಾಳವ ದೇಶದಿಂದ ಸೆರೆ ಹಿಡಿದು ತಂದನು. ಮುಂಜರಾಜನು ಓಡಿಹೋಗಬೇಕೆಂದು ಮಾಡಿದ್ದನು. ಇದು ತೈಲಪನಿಗೆ ತಿಳಿದ ಕೂಡಲೆ ಅವನನ್ನು ಹಿಡಿದು ತರಿಸಿ, ಮನೆಮನೆ ಬಿಕ್ಕೆ ಬೇಡಿಸಿ, ಆಮೇಲೆ ಕೊಲ್ಲಿಸಿದನು. ಆ ಕಾಲದ ರಾಜರಿಗೆ ತೈಲಪನೆಂದರೆ ಹುಲಿಯಾಗಿ ಬಿಟ್ಟಿದ್ದನು.



ಶ್ರೀ ಗೋಮಟೇಶ್ವರ ಮೂರ್ತಿ

ಹೀಗೆ ತನ್ನ ಶತ್ರುಗಳಿಗೆ ಹುಲಿಯಾಗಿದ್ದರೂ, ವಿದ್ಯೆಯುಳ್ಳವರಿಗೆ ಆಕಳ ದಂತೆ ಇದ್ದನು. ಮುಧೋಳದ ಬಳೆಗಾರ ಮನೆತನದವನಾದ ರನ್ನನೆಂಬ

ಕವಿಯನ್ನು ತನ್ನ ಓಲಗಕ್ಕೆ ಕರೆಯಿಸಿಕೊಂಡು ಅವನಿಗೆ ಛತ್ರ ಚಾಮರಾದಿ ಗಳಿಂದ ಮರ್ಯಾದೆ ಮಾಡಿದ್ದಲ್ಲದೆ "ಕವಿ ಚಕ್ರವರ್ತಿ" ಎಂಬ ಬಿರುದು ಕೊಟ್ಟನು. ರನ್ನ ಕವಿಯು "ಗದಾಯುದ್ಧ" ವೆಂಬ ಕನ್ನಡ ಕಾವ್ಯದಲ್ಲಿ ತೈಲಪನನ್ನು ಬಾಯಿತುಂಬ ಹೊಗಳಿದ್ದಾನೆ.

ಈತನ ಕಾಲದಲ್ಲಿಯೇ ಶ್ರವಣಬೆಳಗೊಳದಲ್ಲಿ (ಈಗಿನ ಮೈಸೂರ ಸಂಸ್ಥಾನದಲ್ಲಿ) ರಾಚಮಲ್ಲನೆಂಬ ಗಂಗರಸನ ಮಂತ್ರಿಯಾದ ಚಾಮುಂಡ ರಾಜನು ಗೋಮಟೇಶ್ವರ ಎಂಬ ಅತ್ಯಂತ ಸುಂದರವಾದ ಜಿನಮೂರ್ತಿಯನ್ನು ಕೊರೆಯಿಸಿದನು. ಇಷ್ಟು ದೊಡ್ಡ ಮತ್ತು ಭವ್ಯ ಮೂರ್ತಿಯು ಏಶಿಯ ಖಂಡದೊಳಗೆ ಮತ್ತೊಂದಿಲ್ಲ. ಇದನ್ನು ನೋಡಲು ದೂರ ದೂರದಿಂದ ಜನರು ಬರುತ್ತಾರೆ.

## ಅಭ್ಯಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ತೈಲಪನು............ವಂಶದ ಅರಸನು.

(ಆ) ಮಾಳವದ ಮುಂಜರಾಜನು .. ........ವನ್ನು ಸುಲಿದುಕೊಂಡು ಒಯ್ಯುತ್ತಿದ್ದ ಎಲ್ಲ............ನ್ನು ತೈಲಪನು ದೋಚಿಕೊಂಡು ಬಂದನು.

(ಇ) ಮಳಖೇಡದ ರಾಜನಾಗಿದ್ದ............ನನ್ನು ಸೋಲಿಸಿ ಆವನ ಮಗಳಾದ............ಯನ್ನು ಲಗ್ನವಾದನು.

(ಈ) ತೈಲಪನನ್ನು ಸವದತ್ತಿಯ ........ರನ್ನೂ ಕೊಂಕಣದ........ ರನ್ನೂ ತಾನು ಹೇಳಿದಂತೆ ಕೇಳಲು ಹಚ್ಚಿದನು.

(ಉ) ಶತ್ರುಗಳಿಗೆ...............ಯಾಗಿದ್ದರೂ, ವಿದ್ಯೆಯುಳ್ಳವರಿಗೆ ತೈಲಪನು............ವಂತೆ ಇದ್ದನು.

(ಊ) ಮುಧೋಳದ............ನೆಂಬ ಕವಿಯನ್ನು ತನ್ನ........ಕ್ಕೆ ಕರೆಯಿಸಿಕೊಂಡು ಆವನಿಗೆ............ಗಳಿಂದ ಮರ್ಯಾದೆ ಮಾಡಿದ್ದಲ್ಲದೆ, ....... ಎಂಬ ಬಿರುದು ಕೊಟ್ಟನು.

(ಎ) ರನ್ನ ಕವಿಯು..........ವೆಂಬ ಕಾವ್ಯವನ್ನು............ಭಾಷೆ ಯಲ್ಲಿ ಬರೆದಿದ್ದಾನೆ.

(ಏ) ಇವನ ಕಾಲದಲ್ಲಿ ರಾಚಮಲ್ಲನೆಂಬ ಗಂಗರಸನ ಮಂತ್ರಿಯಾದ ........ನು.... ...ಎಂಬ ಸುಂದರ ಜಿನಮೂರ್ತಿಯನ್ನು........ದಲ್ಲಿ ಕೊರೆಸಿದನು.

# ೧೦. ಶಕಪುರುಷನಾದ ವಿಕ್ರಮಾದಿತ್ಯನು

ಚಾಲುಕ್ಯ ವಂಶದ ೧ನೆಯ ಸೋಮೇಶ್ವರನಿಗೆ ಇಮ್ಮಡಿ ಸೋಮೇಶ್ವರ, ಇಮ್ಮಡಿ ವಿಕ್ರಮಾದಿತ್ಯ, ಜಯಸಿಂಹರೆಂಬ ಮೂರು ಮಂದಿ ಮಕ್ಕಳಿದ್ದರು. ಇವರಲ್ಲಿ ನಡುವಿನವನೇ ನಮ್ಮ ಕಥಾನಾಯಕನು. ಇವನು ಚಿಕ್ಕಂದಿನಿಂದಲೇ ಪರಾಕ್ರಮಿಯಾಗಿದ್ದನು. ಚೋಳರನ್ನು ಬಗ್ಗುಬಡಿಯಲು ಇವನ ತಂದೆಯು ಒಮ್ಮೆ ಇವನನ್ನು ಚಿಕ್ಕವನಿರುವಾಗಲೇ ಕರಕೊಂಡು ಹೋಗಿದ್ದನು. ಅಣ್ಣೀಗೇರಿಯ ಹತ್ತರ ಈ ಕಾಳಗವಾಯಿತು. ಈ ಯುದ್ಧದಲ್ಲಿ ಇವನು ತನ್ನ ಶೌರ್ಯ-ಧೈರ್ಯ-ಸಾಹಸ-ಬುದ್ಧಿವಂತಿಕೆಗಳನ್ನು ಚೆನ್ನಾಗಿಯೇ ತೋರಿಸಿಕೊಟ್ಟನು. ವಯಸ್ಸಿಗೆ ಬಂದಮೇಲೆ ತನ್ನ ತಂದೆಯ ಅಪ್ಪಣೆ ಪಡೆದು ಬಲವಾದ ಕರ್ನಾಟಕ ದಂಡನ್ನು ಕಟ್ಟಿಕೊಂಡು ದಿಗ್ವಿಜಯಕ್ಕಾಗಿ ಉತ್ತರ ಭಾರತಕ್ಕೆ ಹೊರಟನು. ಮಾಳವ ದೇಶಕ್ಕೆ ಹೋಗಿ, ಅಲ್ಲಿಯ ರಾಜನನ್ನು ಕಾಡುತ್ತಿದ್ದ ಅರಸರನ್ನು ಮುರಿಬಡಿದನು. ಕನೋಜಕ್ಕೆ ಹೋಗಿ, ಚಂದ್ರಸೇನನೆಂಬ ಕರ್ನಾಟಕ ವೀರನನ್ನು ಪಟ್ಟಕ್ಕೆ ಕುಳ್ಳಿರಿಸಿ, ಬಂಗಾಲದೇಶಕ್ಕೆ ನಡೆದನು. ಬಂಗಾಲ, ಬಿಹಾರ, ಆಸಾಮು, ನೇಪಾಳಗಳನ್ನು ಗೆದ್ದು, ಅಲ್ಲಿ ನಾನ್ಯದೇವನೆಂಬ ತನ್ನ ಕನ್ನಡ ದಂಡನಾಯಕನನ್ನು ಸಾಮಂತ ರಾಜನನ್ನಾಗಿ ಮಾಡಿ, ತನ್ನ ದೇಶಕ್ಕೆ ತಿರಳಿದನು. ಆಸಾಮು, ಬಂಗಾಲ, ನೇಪಾಳಗಳಲ್ಲಿ ಕನ್ನಡಿಗರ ಪತಾಕೆಯನ್ನು ಹಾರಾಡಿಸಿದವನು ಇವನೊಬ್ಬನೇ. ಹೀಗೆ ತನ್ನ ಕಣ್ಣಿಗೆ ಬಿದ್ದ ರಾಜರಿಂದ ಕಪ್ಪಕಾಣಿಕೆ ಎತ್ತಿ, ಅವರನ್ನು ತನ್ನ ಮಾಂಡಲಿಕರನ್ನಾಗಿ ಮಾಡುತ್ತ, ಉತ್ತರ ಭಾರತವನ್ನೆಲ್ಲ ಸುತ್ತಾಡಿ ತನ್ನ ಹಳೆಯ ರಾಜಧಾನಿಯಾದ ಬಳ್ಳಿಗಾವಿಗೆ ಬಂದನು.

ಮುಂದೆ ಕೆಲದಿನಗಳ ತರುವಾಯ ಇವನ ತಂದೆ ವಿಷಮಜ್ವರದಿಂದ ತೀರಿಕೊಂಡನು. ಅವನ ಹಿರಿಯ ಮಗ ಇಮ್ಮಡಿ ಸೋಮೇಶ್ವರನು ಪಟ್ಟಕ್ಕೆ ಬಂದನು. ವಿಕ್ರಮನು ತನ್ನ ಅಣ್ಣನಿಗಿಂತ ಶೂರನಿದ್ದರೂ ತಾನೇ ಅರಸನಾಗಬೇಕೆಂಬ ದುರಾಶೆಯು ಅವನಲ್ಲಿರಲಿಲ್ಲ. ತಂದೆಯು ಇದ್ದಾಗ ಹೇಗೋ ಹಾಗೆಯೇ ಅಣ್ಣನ ಆಳಿಕೆಯಲ್ಲಿಯೂ ನಾನಾ ದೇಶಗಳಿಗೆ ಹೋಗಿ ಅವುಗಳನ್ನು ಗೆದ್ದು ಸಿಕ್ಕ ಸಂಪತ್ತನ್ನು ಅಣ್ಣನಿಗೆ ಒಪ್ಪಿಸುವದರಲ್ಲಿಯೇ ಸಂತೋಷಬಡುತ್ತಿದ್ದನು. ತನ್ನ ಅಣ್ಣನೆಂದರೆ ತಂದೆಯೆಂದು ಭಾವಿಸಿ ಎಳ್ಳಷ್ಟೂ ಸ್ವಾರ್ಥದ

ಕಲ್ಪನೆಯಿಲ್ಲದೆ ನಡೆಯುತ್ತಿದ್ದನು. ಆದರೆ, ಇಮ್ಮಡಿ ಸೋಮೇಶ್ವರನು ದೊಡ್ಡಮನಸ್ಸಿನವನಿದ್ದಿಲ್ಲ. ಅವನು ಹೇಡಿಯೂ, ಸ್ವಾರ್ಥಿಯೂ, ಹೊಟ್ಟೆಕಿಚ್ಚಿನವನೂ ಇದ್ದನು. ಈ ದುರ್ಗುಣಗಳೆಲ್ಲ ಬರಬರುತ್ತ ಜನರಿಗೆ ಗೊತ್ತಾಗಿ ಅವನು ಎಲ್ಲರಿಗೂ ಬೇಡಾದನು. ತನ್ನ ತಮ್ಮಂದಿರನ್ನು ಸೆರೆಹಿಡಿಯಬೇಕೆಂಬ ಒಳಸಂಚನ್ನು ಹೂಡಿದ್ದನು; ಆದರೆ ಅದು ಸಾಧಿಸಲಿಲ್ಲ.

ಕಲ್ಯಾಣ ಚಾಳುಕ್ಯ ವಿಕ್ರಮಾಂಕನ ರಾಜ್ಯ.

ವಿಕ್ರಮಾಂಕನ ರಾಜ್ಯವಿಸ್ತಾರ

ವಿಕ್ರಮನು ದೊಡ್ಡ ದಂಡು ಕಟ್ಟಿಕೊಂಡು ದಕ್ಷಿಣ ಭಾರತದಲ್ಲಿ ದಿಗ್ವಿಜಯಕ್ಕೆ ಹೊರಟನು. ಶಿಲಾಹಾರ, ಕದಂಬ, ಕೇರಳ ರಾಜ್ಯಗಳನ್ನು ಗೆದ್ದು ಅವರಿಂದ ಲೆಕ್ಕವಿಲ್ಲದಷ್ಟು ಕಪ್ಪಕಾಣಿಕೆ ಎತ್ತಿ ಚೋಳರಾಜ್ಯದಲ್ಲಿ ಹೊಕ್ಕನು.

ವಿಕ್ರಮನ ಪರಾಕ್ರಮವನ್ನು ಕೇಳಿ, ಚೋಳರಾಜನು ಒಪ್ಪಂದ ಮಾಡಿಕೊಂಡು ತನ್ನ ಮಗಳನ್ನು ಅವನಿಗೆ ಲಗ್ನ ಮಾಡಿಕೊಟ್ಟನು. ಅಲ್ಲಿಂದ ಹೊರಟು ವಿಕ್ರಮನು ಕೆಲದಿನ ತನ್ನ ರಾಜಧಾನಿಯಾದ ಕಂಪಲಿಯಲ್ಲಿದ್ದುಕೊಂಡನು.

ವಿಕ್ರಮನ ಪರಾಕ್ರಮವನ್ನು ನೋಡಿ, ಇಮ್ಮಡಿ ಸೋಮೇಶ್ವರನ ಹೊಟ್ಟೆ ಕಿಚ್ಚು ದಿನದಿನಕ್ಕೆ ಬೆಳೆಯಹತ್ತಿತು. ವಿಕ್ರಮನ ವೈರಿಯಾದ ರಾಜಿಗನೆಂಬ ಚಾಲುಕ್ಯರ ಅರಸನನ್ನು ತನ್ನ ಸಹಾಯಕ್ಕೆ ಕರಕೊಂಡು ಒಂದು ದೊಡ್ಡ ದಂಡಿನೊಡನೆ ವಿಕ್ರಮನ ಮೇಲೇರಿ ಹೋದನು. ವಿಕ್ರಮನ ಮುಂದೆ ಇವರ ಆಟ ನಡೆಯಲಿಲ್ಲ. ರಾಜಿಗನು ಹೆದರಿ ಓಡಿ ಹೋದನು. ಸೋಮೇಶ್ವರನು ಸೆರೆಸಿಕ್ಕನು. ಅವನನ್ನು ಕಟ್ಟಿಕೊಂಡು ಯಾದಗಿರಿಗೆ ಹೋದನು. ಅಲ್ಲಿಗೆ



ಹೋದ ಬಳಿಕ, ವಿಕ್ರಮನು ತಾನೇ ಕ್ರಿ. ಶ. ೧೦೭೬ರಲ್ಲಿ ಚಾಲುಕ್ಯ ಸಿಂಹಾಸನದ ಮೇಲೆ ಕುಳಿತು ತನ್ನ ಹೆಸರಿನ ಶಕವನ್ನು ಅಂದಿನಿಂದ ಪ್ರಾರಂಭಿಸಿದನು ಇವನು ಕರ್ನಾಟಕ, ದಕ್ಷಿಣಭಾರತ, ಮತ್ತು ಉತ್ತರಭಾರತದ ಕೆಲವು ಭಾಗಕ್ಕೆ ಚಕ್ರವರ್ತಿಯಾದನು. ಆ ಕಾಲಕ್ಕೆ ಇವನೊಬ್ಬ ಸಿಂಹನಂತಿದ್ದನು. ಇವನಿಗೆ ಸೋಲು ಎಂಬುದು ಗೊತ್ತಿರಲಿಲ್ಲ. ಕರ್ಹಾಡದ ಶಿಲಾಹಾರ ರಾಜನ ಮಗಳಾದ ಚಂದಲದೇವಿಯ ಸ್ವಯಂವರಕ್ಕೆ ಹೋಗಿದ್ದನು. ಇದಕ್ಕೆ ಇಡಿಯ

ಭರತಖಂಡದ ನೂರಾರು ಮಂದಿ ಅರಸರು ಬಂದಿದ್ದರು. ಚಂದಲದೇವಿಯು ವಿಕ್ರಮನಿಗೇ ಮಾಲೆ ಹಾಕಿದಳು. ಇವನು ೫೦ ವರುಷ ಆಳಿದನು. ಇವನ ಆಳಿಕೆಯೆಂದರೆ ಸುಖದ ಸುಗ್ಗಿ.

ಇವನು ಶೂರನಿದ್ದಂತೆ, ವಿದ್ಯಾಪಕ್ಷಪಾತಿಯೂ ಆಗಿದ್ದನು. ತನ್ನ ಓಲಗದಲ್ಲಿ ವಿಜ್ಞಾನೇಶ್ವರ, ಬಿಲ್ಹಣ ಮುಂತಾದ ಪಂಡಿತರಿಗೂ ಕವಿಗಳಿಗೂ ಆಶ್ರಯ ಕೊಟ್ಟಿದ್ದನು.

## ಅಭ್ಯಸನಗಳು

೧. ಇವನು ದಿಗ್ವಿಜಯ ಮಾಡಿ ಗೆದ್ದ ದೇಶಗಳಾವವು?

೨. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದರ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದುಕೊಂಡು ವಾಕ್ಯ ಪೂರ್ಣಮಾಡಿ ಬರೆಯಿರಿ—

(ಅ) ವಿಕ್ರಮಾದಿತ್ಯನು...........ವರುಷ ರಾಜ್ಯವಾಳಿದನು. (೪೦, ೫೦, ೬೦)

(ಆ) ಕನೋಜವನ್ನು ಗೆದ್ದು, ಅಲ್ಲಿ...........ಎಂಬ ಕರ್ನಾಟಕದ ವೀರರನ್ನು ಪಟ್ಟಕ್ಕೆ ಕುಳ್ಳಿರಿಸಿದನು. (ನಾನ್ಯದೇವ, ಚಂದ್ರದೇವ)

(ಇ) ಕ್ರಿ.ಶ........ ........ರಲ್ಲಿ ಸಿಂಹಾಸನವನ್ನೇರಿ ತನ್ನ ಹೆಸರಿನ ಶಕವನ್ನು ಪ್ರಾರಂಭಿಸಿದನು. (೧೦೭೬, ೧೧೭೬, ೧೨೭೬)

(ಈ) ಕರ್ಹಾಡದ ಶಿಲಾಹಾರ ರಾಜನ ಮಗಳಾದ...............ಯ ಸ್ವಯಂವರಕ್ಕೆ ವಿಕ್ರಮನು ಹೋಗಿದ್ದನು. (ಲಕ್ಷ್ಮೀದೇವಿ, ಚಂದಲದೇವಿ)

(ಉ) ಉತ್ತರ ಭಾರತದ ದಿಗ್ವಿಜಯವನ್ನು ಮುಗಿಸಿಕೊಂಡು ತನ್ನ ರಾಜಧಾನಿಯಾದ........ಗೆ ಬಂದನು. (ಬಳ್ಳಿಗಾವಿ, ಕಂಪಲಿ)

# ೧೧. ಸಳನು

ಈಗಿನ ಮೈಸೂರು ಸಂಸ್ಥಾನದ ಕಡೂರು ಜಿಲ್ಲೆಯಲ್ಲಿ ಅಂಗಡಿ ಎಂಬ ದೊಂದು ಗ್ರಾಮ. ಈ ಗ್ರಾಮದಲ್ಲಿ ಸಳನೆಂಬ ಒಬ್ಬ ವೀರ ಜೈನ ತರುಣ ನಿದ್ದನು. ಈ ಗ್ರಾಮದ ಸಮೀಪದಲ್ಲಿ ಒಂದು ದೊಡ್ಡ ಅಡವಿಯಿತ್ತು. ಆ ಅಡವಿಯ ಮಗ್ಗುಲಲ್ಲಿ ವಾಸಂತಿಕಾ ದೇವಿಯ ಗುಡಿಯಿತ್ತು. ಆ ಗುಡಿಯಲ್ಲಿ ಸುದತ್ತರೆಂಬ ಜೈನ ಮುನಿಗಳು ವಾಸಿಸುತ್ತಿದ್ದರು. ಇವರು ಸಳನ ಗುರುಗಳು. ವಾಡಿಕೆಯಂತೆ ಒಂದು ದಿನ ಸಳನು ಬೇಟೆಯಾಡಲು ಆ ಅಡವಿಗೆ ಹೋದನು. ಬೇಟೆಯಾಡಿ ದಣಿದು ಕಂಗಾಲಾಗಿ ವಾಸಂತಿಕಾ ದೇವಿಯ ಗುಡಿಯತ್ತ ದಣುವಾರಿಸಿಕೊಳ್ಳಲು ನಡೆದನು. ಅಲ್ಲಿ ಸುದತ್ತ ಮುನಿಗಳ ದರ್ಶನವನ್ನು ಪಡೆದು ಅವರ ಉಪದೇಶವನ್ನು ಕೇಳುತ್ತ ಕುಳಿತನು. ಇಷ್ಟರೊಳಗೆ ಹೆಬ್ಬುಲಿ ಯೊಂದು ಗುಡುಗು ಹೊಡೆಯುತ್ತ ಗುಡಿಯ ಆವಾರದಲ್ಲಿ ಪ್ರವೇಶಿಸಿತು. ಆಗ ಗುರುಗಳು 'ಸಳನೇ, ಹೊಯ್ಯು' ಎಂದು ಹೇಳಿದರು. ಕೂಡಲೆ ಸಳನು ತನ್ನ ಕೈಯಲ್ಲಿರುವ ಕಠಾರಿಯನ್ನು ಅದರ ಬಾಯಲ್ಲಿ ತುರುಕಿ ಇರಿದು



ಕೊಂದು ಹಾಕಿದನು. ಸಳನ ಈ ಪರಾಕ್ರಮಕ್ಕೆ ಮೆಚ್ಚಿ ಗುರುಗಳು ಅವನನ್ನು ಬಹಳವಾಗಿ ಕೊಂಡಾಡಿದರು. ಅಂದಿನಿಂದ ಅವನಿಗೆ ಹೊಯ್ಸಳ (ಹೊಯ್+ ಸಳ) ಎಂಬ ಅಡ್ಡ ಹೆಸರು ಬಂದಿತು.

ಈ ಸಮಯದಲ್ಲಿ ಕರ್ನಾಟಕದಲ್ಲಿ ಅಲ್ಲಲ್ಲಿ ಚಿಕ್ಕ ಅರಸರು ಆಳುತ್ತಿದ್ದರು. ಇವರಲ್ಲಿ ಒಕ್ಕಟ್ಟು ಇರಲಿಲ್ಲ. ಈ ಸಂಧಿಯನ್ನು ಸಾಧಿಸಿ, ತಮಿಳುನಾಡಿನ ಚೋಳರಾಜನು ಸರತಿಗೆ ಒಬ್ಬೊಬ್ಬನಂತೆ ಇವರನ್ನು ಮುರಿಬಡಿಯುತ್ತ ಇಡಿಯ ಕನ್ನಡನಾಡನ್ನು ಕೈವಶ ಮಾಡಿಕೊಂಡಿದ್ದನು. ಈ ಸ್ಥಿತಿಯನ್ನು ನೋಡಿ ಸಳನಂತಹ ವೀರ ಪುರುಷನಿಗೆ ಸಹನವಾಗುವದೆಂತು? ಹಗಲಿರುಳು ತನ್ನ ತಾಯ್ನಾಡನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಚಿಂತೆಯು ಅವನನ್ನು ಬಲವಾಗಿ ಬಾಧಿಸತೊಡಗಿತು. ಸೈನಿಕರನ್ನು ಕೂಡಿಸಿ ಅವರಿಗೆ ಶಿಕ್ಷಣವನ್ನು ಕೊಡಹತ್ತಿದನು. ಈ ಕಾರ್ಯದಲ್ಲಿ ಈತನ ಗುರುಗಳಾದ ಸುದತ್ತ ಮುನಿಗಳು ಮೇಲಿಂದ ಮೇಲೆ ಉಪದೇಶವನ್ನು ಕೊಟ್ಟು ಸಹಾಯ ಮಾಡಿದರು. ಸಳನಿಗೂ ಚೋಳ ರಾಜನಿಗೂ ಯುದ್ಧವಾಯಿತು. ಅದರಲ್ಲಿ ಚೋಳರಾಜನು ಸೋತು ಓಡಿಹೋದನು. ತಾಯ್ನಾಡೆಲ್ಲ ಸಳನ ಕೈಸೇರಿತು. ನೆರೆಹೊರೆಯ ನಾಡುಗಳನ್ನು ಗೆದ್ದು ತನ್ನ ರಾಜ್ಯವನ್ನು ವಿಸ್ತರಿಸಿದನು. ಈ ಮನೆತನದ ಅರಸರು ಮೊದಲು ಚಾಲುಕ್ಯರ ಮಾಂಡಲಿಕರಾಗಿದ್ದು ಬರುಬರುತ್ತ ಸ್ವತಂತ್ರ ರಾದರು. ಈ ಮನೆತನವು ವಿಷ್ಣುವರ್ಧನ ಮತ್ತು ವೀರಬಲ್ಲಾಳ ಇವರಿಬ್ಬರ ಆಳಿಕೆಯಲ್ಲಿ ಬಹಳ ವೈಭವಕ್ಕೇರಿತು.

## ಅಭ್ಯಸನಗಳು

೧. ಸಳನಿಗೆ ಹೊಯ್ಸಳ ಎಂಬ ಅಡ್ಡ ಹಸರು ಏಕ ಬಂದಿತು?

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಈಗಿನ ಮೈಸೂರು ಸಂಸ್ಥಾನದ....,..............ಜಿಲ್ಲೆಯಲ್ಲಿ .ಎಂಬದೊಂದು ಗ್ರಾಮವಿದೆ.

(ಆ) ಈ ಗ್ರಾಮದಲ್ಲಿ..............ನೆಂಬ ಒಬ್ಬ . ....... ....ತರುಣ ನಿದ್ದನು.

(ಇ) ಈ ಗ್ರಾಮದ ಹತ್ತಿರ ..........ಯ ಮಗ್ಗುಲಲ್ಲಿ...............
ದೇವಿಯ ಗುಡಿಯಿತ್ತು.

(ಈ) ಆ ಗುಡಿಯಲ್ಲಿ..............ರೆಂಬ ಜೈನ...........ಗಳು ವಾಸಿ
ಸುತ್ತಿದ್ದರು.

(ಉ) ಗುರುಗಳು........ನಿಗೆ ಉಪದೇಶ ಮಾಡುತ್ತಿರುವಾಗ........
ಯೊಂದು ಆ ಗುಡಿಯ...........ದಲ್ಲಿ........ ...ಹೊಡೆಯುತ್ತ ಪ್ರವೇಶಿಸಿತು.

(ಊ) ಗುರುಗಳು ತಮ್ಮ ಹತ್ತಿರವಿದ್ದ...........ಯನ್ನು........ನಿಗೆ
ಕೊಟ್ಟು........ಎಂದು ಅಂದರು.

(ಎ) ಅಂದಿನಿಂದ ಸಳನಿಗೆ........ಎಂಬ ಅಡ್ಡ ಹೆಸರು ಬಂದಿತು.

## ೧೨. ವಿಷ್ಣುವರ್ಧನ

ಇವನ ಮೊದಲಿನ ಹೆಸರು ಬಿಟ್ಟಿದೇವ. ಈತನು ಪಟ್ಟಕ್ಕೆ ಬಂದಾಗ, ಹೊಯ್ಸಳ ಸಿಂಹಾಸನವು ಸ್ಥಾಪಿಸಲ್ಪಟ್ಟು ಒಂದು ನೂರು ವರುಷಗಳಾಗಿದ್ದವು ಇವನ ಅಜ್ಜ, ಮುತ್ತಂದಿರಾದ ವಿನಯಾದಿತ್ಯ, ಎರೆಯಂಗರಂತಹ ವೀರರು ಹುಟ್ಟಿ ಹೊಯ್ಸಳ ರಾಜ್ಯವನ್ನು ಬಲುಮಟ್ಟಿಗೆ ಹಬ್ಬಿಸಿದರು. ಚಾಲುಕ್ಯರಿಗೂ ಇವರಿಗೂ ಬಹುದಿನಗಳಿಂದ ಬಾಂಧವ್ಯ, ಪ್ರೀತಿಗಳಿದ್ದರೂ, ವಿಷ್ಣುವರ್ಧನನು ಚಾಲುಕ್ಯ ವಿಕ್ರಮನ ಕಾಲಕ್ಕೆ ಸ್ವತಂತ್ರನಾಗಲು ಹವಣಿಸಿದನು. ಆದರೆ ಆ ಜಗಮಲ್ಲನ ಮುಂದೆ ಈ ಮಲ್ಲನ ಆಟವು ನಡೆಯಲಿಲ್ಲ. ಅವನು ತೀರಿಕೊಂಡ ತರುವಾಯ ಸೋಮೇಶ್ವರನನ್ನು ಯುದ್ಧದಲ್ಲಿ ಸೋಲಿಸಿ, ಹಾನಗಲ್ಲು, ಉಚ್ಚಂಗಿದುರ್ಗ, ಹಲಸಿಗೆ, ಪುಲಿಗೆರೆ, ಬನವಾಸಿ ಮುಂತಾದವುಗಳನ್ನು ಗೆದ್ದನು. ಪಾಂಡ್ಯರನ್ನು ಮುರಿಬಡಿದು, ತುಳುವರನ್ನು ತನ್ನ ನಾಡಿಗೆ ಸೇರಿಸಿಕೊಂಡನು. ಮೈಸೂರ ಸೀಮೆಯಲ್ಲಿದ್ದ ತಲಕಾಡು ಮತ್ತು ಯಾದವಪುರ, ಬಂಕಾಪುರ, ದ್ವಾರಸಮುದ್ರ ಇವೇ ಇವನ ರಾಜಧಾನಿಗಳು.

ಇವನ ಕಾಲಕ್ಕೆ ಚೋಳರ ರಾಜ್ಯದಲ್ಲಿ ಶ್ರೀ ರಾಮಾನುಜಾಚಾರ್ಯರೆಂಬವರು ವಿಶಿಷ್ಟಾದ್ವೈತವೆಂಬ ಶ್ರೀವೈಷ್ಣವ ಮತವನ್ನು ಹೊರಡಿಸಿ ಅದನ್ನು ಪ್ರಚಾರ ಮಾಡತೊಡಗಿದ್ದರು. ಇದು ಚೋಳರಾಜನ ಮನಸ್ಸಿಗೆ ಬರಲಿಲ್ಲ

ವಾದ್ದರಿಂದ, ಅವನು ಆಚಾರ್ಯರಿಗೆ ಇಲ್ಲದ ತೊಂದರೆ ಕೊಡಹತ್ತಿದನು. ಆಚಾರ್ಯರು ಬೇಸತ್ತು ಚೋಳ ರಾಜ್ಯವನ್ನು ಬಿಟ್ಟು ವಿಷ್ಣುವರ್ಧನನ ಆಶ್ರಯವನ್ನು ಬಯಸಿದರು. ಇವನು ಅವರನ್ನು ತನ್ನ ರಾಜ್ಯಧಲ್ಲಿಟ್ಟುಕೊಂಡು ತಾನೂ ಶ್ರೀವೈಷ್ಣವನಾದನು; ತನ್ನ ಮೊದಲಿನ ಹೆಸರಾದ ಬಿಟ್ಟಿದೇವನೆಂಬ ಹೆಸರನ್ನು ಬಿಟ್ಟು ವಿಷ್ಣುವರ್ಧನ ಎಂಬ ಹೆಸರನ್ನಿಟ್ಟುಕೊಂಡನು. ಇವನ ಓಲಗದಲ್ಲಿ ನಾಗಚಂದ್ರ, ರಾಜಾದಿತ್ಯ, ವಿಷ್ಣುದಂಡಾಧಿಪ, ಕಂತಿ ಮುಂತಾದ ಕವಿಗಳಿದ್ದರು. ಇವನು ಬಂಕಾಪುರದಲ್ಲಿ ಮಡಿದನು.

## ಅಭ್ಯಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ವಿಷ್ಣುವರ್ಧನನ ಮೊದಲಿನ ಹೆಸರು............

(ಆ) ಇವನ ರಾಜಧಾನಿಗಳಾವವೆಂದರೆ....... ....

(ಇ) ಇವನ ಕಾಲಕ್ಕೆ ಶ್ರೀ...............ರು ...............ವೆಂಬ ಶ್ರೀ ವೈಷ್ಣವ ಮತವನ್ನು ಪ್ರಾರಂಭಿಸಿದರು.

(ಈ) ............ರಾಜನು ಆಚಾರ್ಯರಿಗೆ ತೊಂದರೆ ಕೊಟ್ಟದ್ದರಿಂದ, ಆವರು............ನ ಆಶ್ರಯವನ್ನು ಬಯಸಿದರು.

(ಉ) ಇವನ ಓಲಗದಲ್ಲಿ...........ಮುಂತಾದ ಕವಿಗಳಿದ್ದರು.

(ಊ) ಇವನು............ದಲ್ಲಿ ಮಡಿದನು.

# ೧೩. ಜಕ್ಕಣಾಚಾರ್ಯರು

ಜಕ್ಕಣಾಚಾರ್ಯರು ನಮ್ಮ ದೇಶದಲ್ಲಿ ಹೆಸರಾದ ಶಿಲ್ಪಿಗಳಾಗಿದ್ದರು. ಇವರು ಕರ್ನಾಟಕದಲ್ಲಿ ಕೆಲವು ಕಡೆಗೆ ಕಲ್ಲಿನ ಗುಡಿಗಳನ್ನು ಕಟ್ಟಿದ್ದಾರೆ. ಇವರು ಕಟ್ಟಿದ ಮಾದರಿಯ ಗುಡಿಗಳಿಗೆ ಜಕ್ಕಣಾಚಾರ್ಯರ ಗುಡಿಗಳೆಂದು ಹೆಸರು ಬಂದಿವೆ. ಇಂತಹ ಗುಡಿಗಳು ಕರ್ನಾಟಕದಲ್ಲಿ ಹಲವು ಕಡೆಗೆ

ದೊರಕುತ್ತವೆ. ಕಲ್ಲಿನ ಕೆತ್ತನೆಯು ಮತ್ತು ಕುಸುರಿನ ಕೆಲಸಗಳು ಹೊಗಳ ತಕ್ಕಂತಹವುಗಳಾಗಿವೆ.

ಜಕ್ಕಣಾಚಾರ್ಯರು ಮೈಸೂರ ಸೀಮೆಯಲ್ಲಿರುವ ತುಮಕೂರು ಜಿಲ್ಲೆಯಲ್ಲಿ ಕೈದಾಳ ಎಂಬ ಊರಲ್ಲಿ ಹುಟ್ಟಿದರು. ಇವರು ಜ್ಯೋತಿಷ್ಯ ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಅದನ್ನು ಪೂರ್ಣವಾಗಿ ಅರಿತವರಾಗಿದ್ದರು. ಆದುದರಿಂದ ತಮ್ಮ ಹೊಟ್ಟೆಯಿಂದ ಹುಟ್ಟಿದ ಮಗನು ವ್ಯಭಿಚಾರದಿಂದ ಹುಟ್ಟಿದವನೆಂದು ಸಂದೇಹ ಬಂದಿತು. ಜ್ಯೋತಿಷ್ಯದಲ್ಲಿ ತುಂಬಾ ವಿಶ್ವಾಸವಿದ್ದ ಇವರಿಗೆ, ಇಷ್ಟು ಕಾರಣದಿಂದ ಸಂಸಾರ ಸಾಕಾಗಿ ಮನೆ ಬಿಟ್ಟು ಅಲ್ಲಲ್ಲಿ ದೇವರ ಗುಡಿಗಳನ್ನು ಕಟ್ಟುತ್ತ ನಡೆದರು. ಹೀಗೆ ದೇವಾಲಯುಗಳನ್ನು ಕಟ್ಟುತ್ತ ಬೇಲೂರಿಗೆ ಬರಲು, ವಿಷ್ಣುವರ್ಧನ ಅರಸನು ಇವರಿಂದ ಚೆನ್ನಕೇಶವ ದೇವಾಲಯುವನ್ನು ಕಟ್ಟಿಸಿದನು. ಆದರಲ್ಲಿ ಚೆನ್ನಕೇಶವ ಮೂರ್ತಿಯು ಪ್ರತಿಷ್ಠೆಯನ್ನು ಮಾಡಿಸಬೇಕೆನ್ನುವಷ್ಟರಲ್ಲಿ ಹದಿನಾರು ವರ್ಷದ ಒಬ್ಬ ಹುಡುಗನು ಬಂದು, ಚೆನ್ನಕೇಶವ ಮೂರ್ತಿಯು ಅಶುದ್ಧ ಕಲ್ಲಿನಿಂದ ಮಾಡಲ್ಪಟ್ಟಿರುವದೆಂದೂ ಅದು ಪ್ರಾಣಪ್ರತಿಷ್ಠೆಗೆ ಯೋಗ್ಯವಿಲ್ಲೆಂದೂ ಸಾರಿದನು. ಜಕ್ಕಣಾಚಾರ್ಯರಿಗೂ ಹುಡುಗನಿಗೂ ವಾದ ನಡೆಯಿತು:—

ಜಕ್ಕ: ಈ ಮೂರ್ತಿಯು ಅಶುದ್ಧ ಕಲ್ಲಿನಿಂದ ಮಾಡಲ್ಪಟ್ಟಿರುವದೆಂದು ನೀನು ಹೇಗೆ ಅನ್ನುವೆ?

ಹುಡುಗ: ಅದನ್ನು ನಾನು ಚೆನ್ನಾಗಿ ನಿರೀಕ್ಷಿಸಿ ನೋಡಿದವನಾಗಿದ್ದೇನೆ. ಅದು ನನಗೆ ಗೊತ್ತಾದ್ದರಿಂದಲೇ, ನಾನು ಅನ್ನುತ್ತೇನೆ.

ಜಕ್ಕ: ನೀನು ಅನ್ನುವಂತೆ ಈ ಮೂರ್ತಿಯು ಕಲ್ಲು ಅಶುಚಿಯೆಂದು ತೋರಿಸಿ ಕೊಟ್ಟರೆ ನನ್ನ ಬಲಗೈಯನ್ನೇ ಕಡಿದುಕೊಳ್ಳುವೆನು.

ಹುಡುಗ: ಓಹೋ! ಅದಕ್ಕೇನು ತಡ? ಈ ಮೂರ್ತಿಯು ಹೊಕ್ಕಳ ಭಾಗದಲ್ಲಿ ಉಸುಕು, ನೀರು ಮತ್ತು ಒಂದು ಕಪ್ಪೆ ಇರುವದು. ನಾನು ಹೇಳಿದಂತೆ ಮಾಡಿದರೆ, ಇದನ್ನು ಸಿದ್ಧ ಮಾಡಿ ತೋರಿಸುವೆನು.

ಜಕ್ಕ: ಏನು ಮಾಡಬೇಕು?



ಶ್ರೀ ಚೆನ್ನಕೇಶವನ ಎದುರಿನಲ್ಲಿ ತಂದೆ ಮಗನ ವಾದ

ಹುಡುಗ: ಮೂರ್ತಿಯ ಮೈಗೆಲ್ಲ ಗಂಧ ಹಚ್ಚಿರಿ; ಹೊಕ್ಕಳದ ಹತ್ತಿರ ಮಾತ್ರ ಹಸಿಯುಳಿದು, ಮಿಕ್ಕಕಡೆ ಒಣಗುವದು.

ಹುಡುಗನ ಈ ದಿಟ್ಟತನದ ನುಡಿಗಳನ್ನು ಕೇಳಿ ಅರಸನೂ ನೆರೆದ ಜನರೂ ದಂಗುಬಡಿದು ಕುಳಿತರು. ಅರಸನು ಗಂಧವನ್ನು ತರಿಸಿ ಮೂರ್ತಿಯ ಮೈಗೆಲ್ಲ ಚೆನ್ನಾಗಿ ಹಚ್ಚಿಸಿದನು. ತುಸು ಹೊತ್ತಿನಲ್ಲಿಯೇ ಆ ಹುಡುಗನು ಹೇಳಿದ ಹಾಗೆಲ್ಲ ಎಲ್ಲ ಭಾಗವು ಒಣಗಿ ಹೊಕ್ಕಳದ ಹತ್ತಿರ ಸ್ವಲ್ಪ ಭಾಗವು ಹಸಿಯುಳಿಯಿತು. ಆ ಮೇಲೆ ಆ ಮೂರ್ತಿಯನ್ನು ಒಡೆದು ನೋಡಲಾಗಿ ಒಳಗೆ ಹೊಕ್ಕಳದಲ್ಲಿ ಉಸುಕು, ನೀರು ಮತ್ತು ಕಪ್ಪೆ ಇವು ಕಂಡುಬಂದವು. ಎಲ್ಲರಿಗೂ ಆಶ್ಚರ್ಯವೆನಿಸಿತು! ಹುಡುಗನ ಬುದ್ಧಿಯನ್ನು ನೆರೆದವರೆಲ್ಲರೂ ಕೊಂಡಾಡಿದರು.

ಅರಸನು: ನೀನಾರ ಮಗನು?

ಹುಡುಗ: ಜಕ್ಕಣಾಚಾರ್ಯರ ಮಗ ಡಂಕಣಾಚಾರ್ಯ. ನನ್ನ ತಂದೆಯು ಜ್ಯೋತಿಷಶಾಸ್ತ್ರದಲ್ಲಿ ವಿದ್ವಾಂಸನಿದ್ದರೂ, ಲೆಕ್ಕದಲ್ಲಿ ತಪ್ಪಿ, ನನ್ನ ತಾಯಿಯ ಮೇಲೆ ಸುಳ್ಳು ದೋಷವನ್ನು ಹೊರಿಸಿ ಬಿಟ್ಟನು!

ಮಗನ ಈ ಮುದ್ದು ಮಾತುಗಳನ್ನು ಕೇಳಿ ಜಕ್ಕಣಾಚಾರ್ಯರಿಗೆ ಹಿಡಿಸಲಾರದಷ್ಟು ಆನಂದವಾಯಿತು! ತಾನು ಮಾಡಿದ ತಪ್ಪಿಗೆ ಬಹಳ ಪಶ್ಚಾತ್ತಾಪ ಪಟ್ಟನು! ಇದನ್ನೆಲ್ಲ ಕೇಳಿ ಅರಸನಿಗೂ ಆನಂದವಾಯಿತು. ತಂದೆ–ಮಗ ಇಬ್ಬರನ್ನೂ ಮನ್ನಿಸಿ, ಅವರಿಗೆ ಹೊಸ ಚೆನ್ನಕೇಶವ ಮೂರ್ತಿಯನ್ನು ಕೆತ್ತುವ ಕೆಲಸವನ್ನು ಒಪ್ಪಿಸಿದನು.

## ಅಭ್ಯಸನೆಗಳು

೧. ತಂದೆ-ಮಗ ಇವರಿಬ್ಬರಲ್ಲಿ ಆದ ಸಂಭಾಷಣವನ್ನು ಬರೆಯಿರಿ.

೨. ಮೂರ್ತಿಯು ಅಶುಚಿಯೆಂದು ಡಂಕಣಾಚಾರ್ಯನು ಹೇಗೆ ಸಿದ್ಧ ಮಾಡಿ ತೋರಿಸಿದನು?

೩. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದುಕೊಂಡು ವಾಕ್ಯವನ್ನು ಪೂರ್ಣವಾಗಿ ಬರೆಯಿರಿ.

(ಅ) ಜಕ್ಕಣಾಚಾರ್ಯರು...............ನ ಕಾಲದಲ್ಲಿದ್ದರು. (ಸಳ, ತೈಲಪ, ವಿಷ್ಣುವರ್ಧನ)

(ಆ) ಇವರು ದೇವಾಲಯಗಳನ್ನು ಕಟ್ಟುತ್ತ ಕಟ್ಟುತ್ತ............ಗೆ ಬಂದರು. (ಕೋಳೂರು, ಬೇಲೂರು, ತುಮಕೂರು)

(ಇ) ವಿಷ್ಣುವರ್ಧನನು ಇವರಿಂದ...............ನ ದೇವಾಲಯವನ್ನು ಕಟ್ಟಿಸಿದನು. (ಚೆನ್ನಕೇಶವ, ಆದಿಕೇಶವ, ವೀರಕೇಶವ)

(ಈ) ...........ವರುಷದ ಹುಡುಗನೊಬ್ಬನು ಬಂದು ಮೂರ್ತಿಯು ಅಶುದ್ಧವೆಂದು ಹೇಳಿದನು. (ಹದಿನೆಂಟು, ಹದಿನೇಳು, ಹದಿನಾರು)

(ಉ) ಜಕ್ಕಣಾಚಾರ್ಯರು ತಮ್ಮೊರಲ್ಲಿ............ ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. (ತರ್ಕ, ಆಯುರ್ವೇದ, ಜ್ಯೋತಿಷ)

---

## ೧೪. ಬಿಜ್ಜಳನು

ಇವನು ಕಲಚೂರಿ ಮನೆತನದವನು. ಕಲ್ಯಾಣದ ಚಾಲುಕ್ಯ ಮನೆತನದ ಮುಮ್ಮಡಿ ತೈಲಪನ ದಂಡನಾಯಕನಾಗಿದ್ದನು. ಇವನ ಆಳಿಕೆಯಲ್ಲಿ ಬಿಜ್ಜಳನಿಗೆ ಪಟ್ಟಕ್ಕೆ ಕೂಡ್ರಲು ಅನುವಾಯಿತು. ಯಾಕಂದರೆ ಬಿಜ್ಜಳನು ಶೂರ; ತೈಲಪನು ಹೇಡಿ. ಅಂದಮೇಲೆ ಕೇಳುವದೇನು? ಬಿಜ್ಜಳನು ಕೊಲ್ಲಾಪುರದ ಮಹಾ ಮಂಡಲೇಶ್ವರನನ್ನೂ ಓರಂಗಲ್ಲಿನ ಕಾಕತೀಯರನ್ನೂ ತನ್ನ ಕಡೆಗೆ ಒಲಿಸಿಕೊಂಡು, ಚಾಲುಕ್ಯರ ಪಟ್ಟವನ್ನು ಹಿಡಿದುಕೊಂಡನು. ತೈಲಪನು ಅಂಜಿ ಅಣ್ಣೀಗೇರಿಗೆ ಹೋಗಿ, ಅಲ್ಲಿ ಕೆಲ ದಿನ ಇದ್ದನು. ಆದರೆ ಬಿಜ್ಜಳನು ಅವನಿಗೆ ಅಲ್ಲಿಯೂ ಇರಗೊಡದ್ದರಿಂದ, ಮುಂದೆ ಬನವಾಸಿಗೆ ಹೋಗಿ ಇದ್ದನು.

ಇವನು ಜೈನನು. ಸ್ವಭಾವದಿಂದ ಮಹಾ ತಂತ್ರಗಾರ ಮತ್ತು ಶೂರ. ಇವನ ಆಳಿಕೆಯಲ್ಲಿ ಬಲದೇವನೆಂಬವನು ಮಂತ್ರಿಯಾಗಿದ್ದನು. ಈ ಬಲದೇವ ಮಂತ್ರಿಯ ಸೋದರಳಿಯಂದಿರು ಶ್ರೀಬಸವಣ್ಣನವರು. ಇವರು ಸಿದ್ದಣ್ಣನೆಂಬ ಮತ್ತೊಬ್ಬ ಮಂತ್ರಿಯ ಕೈಕೆಳಗೆ ಲೆಕ್ಕ ಬರೆಯುವ ಕಾರಕೂನರಾಗಿ ಕೆಲಸ ಮಾಡುತ್ತಿದ್ದರು. ಬಸವಣ್ಣನವರ ಶುದ್ಧ ಆಚರಣೆ ಸತ್ಯನಿಷ್ಠೆಗಳಿಗೆ



ಬಸವಣ್ಣನವರು      ಳನ ಎದುರಿನಲ್ಲಿ ಲಿಪಿಯನ್ನು ಓದುತ್ತಿರುವದು

ಮೆಚ್ಚಿ, ಸಿದ್ಧಣ್ಣ ಮಂತ್ರಿಯು ತನ್ನ ಮಗಳಾದ ನೀಲಾಂಬಿಕೆಯನ್ನು ಅವರಿಗೆ ಕೊಟ್ಟು ಲಗ್ನ ಮಾಡಿದನು. ಬಸವಣ್ಣನವರು ತಮ್ಮ ಉದ್ಯೋಗದಲ್ಲಿ ದಿನ ದಿನಕ್ಕೆ ಏರುತ್ತ ಏರುತ್ತ ನಡೆದರು. ಇಷ್ಟರಲ್ಲಿ ಬಲದೇವ ಮಂತ್ರಿಯು ಮಡಿದನು. ಅವನ ಸ್ಥಳದಲ್ಲಿ ಯಾರನ್ನು ನಿಯಮಿಸಿಕೊಳ್ಳಬೇಕೆಂಬ ಚಿಂತೆಯಲ್ಲಿ ಬಿಜ್ಜಳನು ಇದ್ದನು. ಸಜ್ಜನರಾದ ಕೆಲವರು ಬಸವಣ್ಣನವರ ಹೆಸರನ್ನೇ ಸೂಚಿಸಿದರು. ಬಿಜ್ಜಳನ ಓಲಗದಲ್ಲಿ ಚಾಲುಕ್ಯರ ಕಾಲದ ಒಂದು ಲಿಪಿ ಇತ್ತು. ಅದು ಯಾರಿಗೂ ಓದಲಿಕ್ಕೆ ಬಂದಿದ್ದಿಲ್ಲ. ಬಸವಣ್ಣನವರು ಅದನ್ನು ಸಹಜವಾಗಿ ಓದಿ, ಚಾಲುಕ್ಯರ ಸಿಂಹಾಸನದ ಬುಡದಲ್ಲಿ ಹುಗಿದಿಟ್ಟ ದ್ರವ್ಯ ಇರುವದೆಂದು ಹೇಳಿದರು. ಆದರಂತೆ ಬಿಜ್ಜಳನಿಗೆ ದ್ರವ್ಯ ಸಿಕ್ಕಿತು. ಇದರಿಂದ ಬಸವಣ್ಣನವರಲ್ಲಿ ಬಹು ನಂಬಿಗೆ ಹುಟ್ಟಿ ಅವರಿಗೆ ಮಂತ್ರಿಪದ ಕೊಟ್ಟನು.

ಬಸವಣ್ಣನವರ ವರ್ಚಸ್ಸು ದಿನದಿನಕ್ಕೆ ಬೆಳೆಯಹತ್ತಿತು. ಇವರು ಬಹು ದೊಡ್ಡ ಶಿವಶರಣರು. ಇವರು ಬೋಧಿಸಿದ ವೀರಶೈವ ಮತದ ತತ್ವಗಳು ಜನರ ಮನವನ್ನೆಲ್ಲ ಸೆಳೆದುಕೊಂಡುಬಿಟ್ಟವು. ಇದು ಪರಮತದ ಮಂತ್ರಿಗಳಿಗೆ ಸೇರಲಿಲ್ಲ. ಅವರು ಬಿಜ್ಜಳನಿಗೆ ಬಸವಣ್ಣನವರ ವಿರುದ್ಧ ಚಾಡಿ ಹೇಳಿ ಅವನ ಮನಸ್ಸನ್ನು ಕೆಡಿಸತೊಡಗಿದರು. ಮೊದಲು ಅಂತ್ಯಜನಿದ್ದು ಶಿವಶರಣನಾದ ಹರಳಯ್ಯ; ಮೊದಲು ಬ್ರಾಹ್ಮಣನಿದ್ದು ಶಿವಶರಣನಾದ ಮಧುವಯ್ಯ, ಇವರಿಬ್ಬರಲ್ಲಿ ಬೀಗತನವು ಆಯಿತು. ಇದು ಬಿಜ್ಜಳನಿಗೆ ಸರಿಬರಲಿಲ್ಲ. ಉಳಿದ ಮಂತ್ರಿಗಳೂ ಈ ವೇಳೆಯಲ್ಲಿ ಅವನ ಮನಸ್ಸನ್ನು ಮತ್ತಿಷ್ಟು ಕೆಡಸಿದರು. ಆಗ ಬಿಜ್ಜಳನು ಹರಳಯ್ಯ-ಮಧುವಯ್ಯರ ಕಣ್ಣು ಕೀಳಿಸಿದನು. ಬಿಜ್ಜಳನ ಈ ಅಮಾನುಷ ಕೃತ್ಯದಿಂದ ಶಿವಶರಣರೆಲ್ಲರೂ ಸಿಟ್ಟಾದರು. ಅವನ ಓಲಗದ ದೀವಟಿಗರಾದ ಜಗದೇವ, ಮಲ್ಲ ಬೊಮ್ಮಯ್ಯಗಳೆಂಬ ಶಿವಶರಣರೇ ಅವನನ್ನು ಕೊಂದರು. ಚಾಡಿ ಹೇಳುವವರ ಮಾತನ್ನು ಕೇಳಿ ಬಿಜ್ಜಳನು ಮರಣಕ್ಕೆ ಗುರಿಯಾಗಬೇಕಾಯಿತು.

## ಅಭ್ಯಸನಗಳು

೧. ಬಸವಣ್ಣನವರಿಗೆ ಮಂತ್ರಿಪದ ಸಿಗಲು ಯಾವ ಸಂಗತಿಗಳು ಕಾರಣವಾದವು?

೨. ಬಿಜ್ಜಳನು ಮರಣಕ್ಕೆ ಗುರಿಯಾಗಲು ಯಾವ ಸಂಗತಿಯು ಕಾರಣವಾಯಿತು ?

೩. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.

(ಅ) ಬಿಜ್ಜಳನು .... .... .... ಮನೆತನದವನು.

(ಆ) ಇವನು ಚಾಲುಕ್ಯ ಮನೆತನದ .... .... ನ ದಂಡನಾಯಕನಾಗಿದ್ದನು.

(ಇ) .... .... .... ನು ಶೂರನಾಗಿದ್ದನು. .... .... ನು ಹೇಡಿಯಾಗಿದ್ದನು.

(ಈ) .... .... .... ನೆಂಬವನು ಬಿಜ್ಜಳನ ಮಂತ್ರಿಯಾಗಿದ್ದನು.

(ಉ) .... .... .... ರು ಬಲದೇವ ಮಂತ್ರಿಯ ಸೋದರಳಿಯಂದಿರು.

(ಊ) ಬಸವಣ್ಣನವರು .... .... ಮಂತ್ರಿಯ ಕೈಕೆಳಗೆ .... .... .... ಬರೆಯುವ .... .... ರಾಗಿ ಕೆಲಸ ಮಾಡುತ್ತಿದ್ದರು.

(ಎ) ಬಸವಣ್ಣನವರ ಗುಣಗಳಿಗೆ ಮೆಚ್ಚಿ .... .... ಮಂತ್ರಿಯು ತನ್ನ ಮಗಳಾದ .... .... ಯನ್ನು ಅವರಿಗೆ ಕೊಟ್ಟು ಲಗ್ನ ಮಾಡಿದನು.

(ಏ) .... .... ಮಂತ್ರಿಯು ಮಡಿದನಂತರ, ಅವನ ಸ್ಥಳದಲ್ಲಿ .... .... ....ನ್ನೇ ನಿಯಮಿಸಲು ಸಜ್ಜನರಾದ ಕೆಲವರು ಸೂಚಿಸಿದರು.

(ಐ) ಚಾಡಿ ಹೇಳುವವರ ಮಾತನ್ನು ಕೇಳಿ .... .... .... ನು ಮರಣಕ್ಕೆ ಗುರಿಯಾದನು.

# ೧೫. ಶ್ರೀ ಬಸವೇಶ್ವರರು

ಈಗ ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕಿನ ಸ್ಥಳವಾಗಿರುವ ಬಸವನಬಾಗೇವಾಡಿಯಲ್ಲಿ ಕ್ರಿ. ಶ. ೧೧೩೧ನೆಯ ಇಸವಿಯಲ್ಲಿ ಶ್ರೀ ಬಸವೇಶ್ವರರು ಹುಟ್ಟಿದರು. ಇವರ ತಂದೆಯ ಹೆಸರು ಮಾದರಸ; ತಾಯಿಯ ಹೆಸರು ಮಾದಲಾಂಬಿಕೆ. ಮಾದರಸನು ಬಾಗೇವಾಡಿಯ ಗೌಡನು. ಬಾಗೇವಾಡಿಯ ಶ್ರೀ ಬಸವೇಶ್ವರ ದೇವರಿಗೆ ಹರಕೆ ಹೊತ್ತು ಈ ದಂಪತಿಗಳು ಬಸವಣ್ಣನನ್ನು ಹಡೆದರು. ಬಸವಣ್ಣನವರು ಎಂಟು ವರ್ಷದವರಾದಾಗ, ಶೈವ ಬ್ರಾಹ್ಮಣ

ಪದ್ಧತಿಯಂತೆ ಮಾದರಸನು ಮುಂಜಿ ಮಾಡುವ ಸಿದ್ಧತೆ ಮಾಡಿದನು. ಬಾಲ ಬಸವಣ್ಣನವರು ಒಳ್ಳೆ ಧೈರ್ಯದಿಂದ "ನನಗೆ ಶಿವಲಿಂಗ ದೀಕ್ಷೆಯಾಗಿದೆಯಾದ್ದರಿಂದ ನಾನು ಮುಂಜೀ ಮಾಡಿಕೊಳ್ಳುವದಿಲ್ಲ" ಎಂದು ಅಂದರು. ಮಗನ ಮಾತು ಮಾದರಸನ ಮನಸ್ಸಿಗೆ ಬರಲಿಲ್ಲ. ಬ್ರಾಹ್ಮಣರು ತನ್ನನ್ನು ಕುಲದ ಹೊರಗೆ ಇಡುವರೆಂದು ಅಂಜಿದನು. ಜ್ಞಾನಿಗಳಾದ ಬಸವಣ್ಣನವರು ಹಟ ಹಿಡಿದರು; ಯಾರ ಮಾತನ್ನೂ ಕೇಳಲಿಲ್ಲ; ತಂದೆಯ ಮನೆ ಬಿಟ್ಟು ಬಾಗೇವಾಡಿಯ ಶಿವಶರಣರ ಮನೆಯಲ್ಲಿದ್ದರು. ಮುಂದೆ ಸಂಗಮಕ್ಕೆ ಹೋಗಿ ಕೂಡಲಸಂಗಮ ಗುರುಗಳಿಂದ ಉಪದೇಶ ಹೊಂದಿ ಸಾಧನೆಯಲ್ಲಿ ನಾಲ್ಕೆಂಟು ವರುಷ ಕಾಲಕಳೆದರು. ಸಂಗಮನಾಥನ ಕೃಪೆಯಿಂದ ಲೌಕಿಕ ಪಾರಮಾರ್ಥಿಕ ವಿದ್ಯೆಗಳಲ್ಲಿ ಪರಿಪೂರ್ಣರಾದರು.

ಕೆಲ ದಿನಗಳಾದನಂತರ, ಯೋಗ್ಯ ಕಾಲಕ್ಕೆ ಸೋದರಮಾವನಾದ ಬಲದೇವನು (ಬಿಜ್ಜಳನ ಮಂತ್ರಿಯು) ತನ್ನ ಮಗಳಾದ ಗಂಗಾಂಬಿಕೆಯನ್ನು ಬಸವಣ್ಣನವರಿಗೆ ಕೊಟ್ಟು ಕಲ್ಯಾಣದಲ್ಲಿ ಮದುವೆ ಮಾಡಿದನು. ಬಸವಣ್ಣನವರು ಕಲ್ಯಾಣದಲ್ಲಿದ್ದಾಗ್ಗೆ ಬಿಜ್ಜಳನ ಮತ್ತೊಬ್ಬ ಮಂತ್ರಿಯಾದ ಸಿದ್ಧಣ್ಣನೆಂಬವನು ತನ್ನ ಮಗಳಾದ ನೀಲಾಂಬಿಕೆಯನ್ನು ಅವರಿಗೆ ಕೊಟ್ಟು ಲಗ್ನ ಮಾಡಿದನು. ಬಲದೇವ ಮಂತ್ರಿಯು ಮಡಿದ ನಂತರ, ಆ ಮಂತ್ರಿಪದವು ಬಸವಣ್ಣನವರಿಗೇ ದೊರೆತ ಸಂಗತಿಯು ಬಿಜ್ಜಳರಾಜನ ಕಥೆಯಲ್ಲಿ ನಿಮಗೆ ಈಗಾಗಲೇ ಗೊತ್ತಾಗಿದೆ.

ಬಸವಣ್ಣನವರು ಮಂತ್ರಿಗಳಾದ ಮೇಲೆ ತಮ್ಮ ಸಾಧು ನಡೆನುಡಿಗಳಿಂದ ಬಿಜ್ಜಳನನ್ನು ಸಂತೋಷಪಡಿಸುತ್ತಿದ್ದರು. ರಾಜ್ಯದಲ್ಲಿ ಒಂದೂ ಅನ್ಯಾಯ ನಡೆಯದಂತೆ ದಕ್ಷರಾಗಿರುತ್ತಿದ್ದರು. ಅವರು ಮಹಾ ಶಿವಶರಣರು. ಆದುದರಿಂದ ಅವರ ಕೀರ್ತಿಯು ಭಾರತದಲ್ಲೆಲ್ಲ ಹರಡಿತು. ಅವರ ದರ್ಶನಕ್ಕೆಂದು ಸಾವಿರಾರು ಜನರು ಕಲ್ಯಾಣಕ್ಕೆ ಬರತೊಡಗಿದರು. ಕಲ್ಯಾಣವು ಶಿವಶರಣರ ತವರಮನೆ ಆಯಿತು. ಅವರ ಭಕ್ತಿ–ಜ್ಞಾನ–ವೈರಾಗ್ಯ ಕಂಡು ಅನೇಕರು ಶಿವಶರಣರಾದರು. ಕಲ್ಯಾಣ ಪಟ್ಟಣವು ಶಿವಶರಣರಿಂದ ಭೋರ್ಗರೆಯ ಹತ್ತಿತು. ಬಸವಣ್ಣನವರು "ಅನುಭವ ಮಂಟಪ" ವೆಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದ್ದರು. ಅದಕ್ಕೆ ವೈರಾಗ್ಯ ಮೂರ್ತಿಗಳೆಂದು ಹೆಸರಾದ ಅಲ್ಲಮ

ಪ್ರಭುಗಳು ಅಧ್ಯಕ್ಷರಾಗಿದ್ದರು. ಈ ಅಧ್ಯಕ್ಷಪೀಠಕ್ಕೆ "ಶೂನ್ಯ ಸಿಂಹಾಸನ" ವೆಂದು ಹೆಸರಿದ್ದಿತು. ಅನುಭವ ಮಂಟಪದಲ್ಲಿ ಧರ್ಮ, ತತ್ವಜ್ಞಾನ ಮೊದಲಾದವುಗಳನ್ನು ಕುರಿತು ಚರ್ಚೆಗಳು ನಡೆಯುತ್ತಿದ್ದವು. ಈ ಚರ್ಚೆಯಲ್ಲಿ ಶಿವಶರಣರೂ ಶಿವಶರಣೆಯರೂ ಭಾಗವಹಿಸುತ್ತಿದ್ದರು. ಈ ಚರ್ಚೆಯಲ್ಲಿ ಅನುಭವಿಕರ ಬಾಯಿಂದ ಹೊರಡುತ್ತಿದ್ದ ಮಹತ್ವದ ಮಾತುಗಳಿಗೆ ಅವರವರ "ವಚನಗಳು" ಎಂದು ಅನ್ನುತ್ತಿದ್ದರು. ಇವೇ ಮುಂದೆ ಕನ್ನಡದಲ್ಲಿ ಪ್ರಸಿದ್ಧ



ಶ್ರೀ ಬಸವಣ್ಣನವರು

ವಾಗಿರುವ ವಚನಸಾಹಿತ್ಯಕ್ಕೆ ಮೂಲವಾಗಿವೆ. ಅಲ್ಲಮಪ್ರಭು, ಅಕ್ಕಮಹಾದೇವಿ, ಹರಳಯ್ಯ, ಮಧುವಯ್ಯ, ಹಡಪದ ಅಪ್ಪಣ್ಣ ಮೊದಲಾದ ಶಿವಶರಣರು ಪ್ರಸಿದ್ಧರಾಗಿರುವರು. ಇವರೆಲ್ಲರು ತಮ್ಮ ತಮ್ಮ ಹೊಟ್ಟೆಯ ದೆಸೆಯಿಂದ ಬೇರೆ ಬೇರೆ ಉದ್ಯೋಗಗಳನ್ನು ಅತ್ಯಂತ ಪ್ರಾಮಾಣಿಕತನದಿಂದ ಮಾಡಿಕೊಂಡು ಇದ್ದರು. ಇವರೆಲ್ಲರೂ ಜಾತಿ-ಮತ, ಪಕ್ಷ-ಪಂಗಡ, ಹಿರಿ-

ಕಿರಿ, ಮೇಲು-ಕೀಳು, ಎಂಬ ಭೇದಭಾವವಿಲ್ಲದೆ ಶಿವಭಕ್ತರಿಗೆ ಮಹತ್ವಕೊಟ್ಟು ಎಲ್ಲರೂ ಸಮಾನರಾಗಿ ನಡೆಯುತ್ತಿದ್ದರು.

ಇದು ಪರಮತದ ಮಂತ್ರಿಗಳಿಗೆ ಸೇರಲಿಲ್ಲ. ಅವರು ಬಿಜ್ಜಳನಿಗೆ ಬಸವಣ್ಣನವರ ವಿರುದ್ಧ ಚಾಡಿಹೇಳಿ ಅವನ ಮನಸ್ಸನ್ನು ಕೆಡಿಸಿದ್ದರಿಂದ ಆವನು ಶಿವಶರಣರಾದ ಹರಳಯ್ಯ, ಮಧುವಯ್ಯ ಇವರಿಬ್ಬರ ಕಣ್ಣು ಕಿತ್ತಿಸಿದ್ದನ್ನು ನೋಡಿ ಶಿವಶರಣರು ಸಿಟ್ಟಾಗಿ ಬಿಜ್ಜಳನನ್ನು ಕೊಂದದ್ದನ್ನು ಬಿಜ್ಜಳನ ಕಥೆಯಲ್ಲಿ ನೀವು ಓದಿಕೊಂಡಿರುವಿರಿ. ಚಾಡಿಹೇಳುವವರ ಮಾತನ್ನು ಬಿಜ್ಜಳನು ಕೇಳಿ ಕೆಟ್ಟನು!

ಮುಂದೆ ಕಲ್ಯಾಣದಲ್ಲಿ ನಡೆಯಬಹುದಾದ ಗೊಂದಲಗಳನ್ನು ನೋಡಲಿಕ್ಕಾಗದೆ ಬಸವಣ್ಣನವರು ತಮ್ಮ ಪರಿವಾರ ಮತ್ತು ಶಿವಶರಣರ ಸಹಿತವಾಗಿ ನಡುಹಗಲಲ್ಲಿಯೇ ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ನಡೆದರು. ಅಲ್ಲಿ ಹೋಗಿ, "ಸಾಕು ಮಾಡ್ಯ ತಂದೆ ಲೋಕದಾಟವನಿನ್ನು" ಎಂದು ಬೇಡಿಕೊಂಡು ಸಂಗಮನಾಥನಲ್ಲಿ ಲಿಂಗೈಕ್ಯರಾದರು. ಈ ಕಾಲಕ್ಕೆ ಅವರಿಗೆ ಐವತ್ತು ಮೂರು ವರ್ಷಗಳಾಗಿದ್ದವು.

ಇವರು ಹಾಕಿಕೊಟ್ಟ ತತ್ವಗಳೇ ವೀರಶೈವ ಮತಕ್ಕೆ ತಳಹದಿಯಾಗಿವೆ. ಆವರಿಂದ ವೀರಶೈವ ಮತವು ಬಹಳ ಬೆಳೆಯಿತು. ಸಮಾಜವು ಬಹಳವಾಗಿ ಸುಧಾರಿಸಿತು. ಕನ್ನಡ ಭಾಷೆಗೆ ಶಿವಶರಣರ ವಚನಗಳು ಅಮೃತದಂತಿರುವವು. "ಆಚಾರವೇ ಸ್ವರ್ಗ, ಅನಾಚಾರವೇ ನರಕ; ದಯವಿಲ್ಲದ ಧರ್ಮವದಾವುದಯ್ಯ; ದಯವೇ ಧರ್ಮದ ಮೂಲವಯ್ಯ; ಕಾಯಕವೇ ಕೈಲಾಸವಯ್ಯ; ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ;" ಮುಂತಾದ ಮುತ್ತಿನಂತಹ ವಚನಗಳು ಅವರ ಅಮರವಾಣಿಯಿಂದ ಹೊರಟಿರುವವು. ಅವು ಈಗಲೂ ಜನರ ಮೆಚ್ಚುಗೆಯನ್ನು ಪಡೆದಿವೆ. ಇಲ್ಲಿಯವರೆಗೆ ಸಂಸ್ಕೃತದಲ್ಲಿ ಬರೆಯಲ್ಪಟ್ಟ ವೇದೋಪನಿಷತ್ತುಗಳಲ್ಲಿಯ ದೊಡ್ಡ ದೊಡ್ಡ ತತ್ವಗಳು ಪುಸ್ತಕಗಳಲ್ಲಿಯೇ ಉಳಿದು ಬಿಟ್ಟಿದ್ದವು. ಆ ತತ್ವಗಳನ್ನು, ಅವೇಕೆ? ಅವುಗಳಿಗಿಂತ ಹೆಚ್ಚಿನ ತತ್ವಗಳನ್ನು ಜನಸಾಮಾನ್ಯರಿಗೆಲ್ಲ ತಿಳಿಯುವ ಹಾಗೆ ತಿಳಿಗನ್ನಡದಲ್ಲಿ ತಮ್ಮ ವಚನಗಳಿಂದ ಹೇಳಿಬಿಟ್ಟರು! ವೀರಶೈವರಿಗೆ ಜಾತಿಭೇದವಿಲ್ಲ. ಹೆಂಗಸರಿಗೆ ಗಂಡಸರಷ್ಟೇ ಸಂಸ್ಕಾರವಿರುವದೊಂದು ನೆನಪಿಡತಕ್ಕ ಮಾತಾಗಿದೆ.

## ಅಭ್ಯಸನಗಳು

೧. ಬಸವಣ್ಣನವರ ಕಾಲಕ್ಕೆ ಇದ್ದ ಐದು ಮಂದಿ ಶಿವಶರಣ–ಶರಣೆಯರ ಹೆಸರುಗಳನ್ನು ಹೇಳಿರಿ.

೨. ನಿಮ್ಮ ಮನಸ್ಸಿಗೆ ಬಂದ ಮೂರು ವಚನಗಳನ್ನು ಬರೆಯಿರಿ.

೩. ‘ಅನುಭವ ಮಂಟಪ’ ಈ ಸಂಸ್ಥೆಯ ಬಗೆಗೆ ನಿಮಗೆ ಗೊತ್ತಿದ್ದ ಸಂಗತಿಯನ್ನೆಲ್ಲ ಬರೆಯಿರಿ.

೪. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದುಕೊಂಡು ವಾಕ್ಯವನ್ನು ಪೂರ್ಣವಾಗಿ ಬರೆಯಿರಿ.

(ಅ) ಬಸವಣ್ಣನವರ ತಂದೆಯ ಹೆಸರು....... ............(ಚಟ್ಟರಸ, ಪಾದರಸ, ಮಾದರಸ)

(ಆ) ಅವರ ತಾಯಿಯ ಹೆಸರು...................(ಮಾದಲಾಂಬಿಕೆ, ನೀಲಾಂಬಿಕೆ, ಗಂಗಾಂಬಿಕೆ)

(ಇ) ಇವರು ಕ್ರಿ. ಶ. .................ರಲ್ಲಿ ಬಸವನಬಾಗೇವಾಡಿಯಲ್ಲಿ ಹುಟ್ಟಿದರು. (೧೧೨೨, ೧೧೩೨, ೧೧೪೨)

(ಈ) ಮಾದರಸನು ಬಾಗೇವಾಡಿಯ................(ದೇಸಾಯಿಯು, ಕುಲಕರ್ಣಿಯು, ಗೌಡನು)

(ಉ) ಇವರು...............ನಲ್ಲಿ ಲಿಂಗೈಕ್ಯರಾದರು. (ಕಾಶೀನಾಥ, ಸಂಗಮನಾಥ, ಪಂಢರಿನಾಥ)

# ೧೬. ಅಕ್ಕಮಹಾದೇವಿ

ಶ್ರೀ ಬಸವಣ್ಣನವರ ಕಾಲಕ್ಕೆ ಎಷ್ಟೋ ಹೆಸರಾದ ಶಿವಶರಣೆಯರಾಗಿ ಹೋಗಿದ್ದಾರೆ. ಕಲ್ಯಾಣ ಪಟ್ಟಣದಲ್ಲಿ ಶ್ರೀ ಬಸವೇಶ್ವರರು ಸ್ಥಾಪಿಸಿದ 'ಅನುಭವ ಮಂಟಪ' ಎಂಬ ಸಂಸ್ಥೆಯಲ್ಲಿ ಶಿವಶರಣರಂತೆ ಶಿವಶರಣೆಯರೂ ಧಾರ್ಮಿಕ ವಿಷಯಗಳ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರೆಂಬ ಸಂಗತಿಯು ಬಸವಣ್ಣನವರ ಕತೆಯಲ್ಲಿ ನಿಮಗೆ ಈ ಮೊದಲೇ ಗೊತ್ತಾಗಿದೆ. ಅಂತಹ ಹೆಸರಾದ ಶಿವಶರಣೆಯರಲ್ಲಿ ಅಕ್ಕಮಹಾದೇವಿಗೆ ಮೊದಲನೆಯ ಸ್ಥಾನವು ದೊರೆತಿದೆ.

ಮೈಸೂರು ಸೀಮೆಯಲ್ಲಿ ಉಡುತಡಿ ಎಂಬ ಊರಲ್ಲಿ ನಿರ್ಮಲನೆಂಬ ವೀರ ಶೈವ ಗೃಹಸ್ಥನಿದ್ದನು. ಅವನ ಹೆಂಡತಿ ಸುಮತಿ. ಇವರ ಮಗಳೇ ಅಕ್ಕ ಮಹಾದೇವಿಯು. ಕೂಸಾಗಿದ್ದಾಗಲೆ ಮುದ್ದಾಗಿದ್ದಳು. ಬೆಳೆಯುತ್ತ ಹೋದಂತೆ ಅವಳ ರೂಪಲಾವಣ್ಯಗಳೂ ಬೆಳೆಯುತ್ತ ನಡೆದವು. ತಾಯ್ತಂದೆ ಗಳು ತಮ್ಮ ಮುದ್ದು ಮಗಳನ್ನು ನೋಡಿ ನೋಡಿ ನಲಿಯುತ್ತ ಹಿಗ್ಗುತ್ತ ಕಾಲ ಕಳೆಯಹತ್ತಿದರು. ನಿರ್ಮಲನು ಮನೆಯಲ್ಲಿಯೇ ಮಗಳಿಗೆ ವಿದ್ಯಾಭ್ಯಾಸ ವನ್ನು ಮಾಡಿಸಿದನು. ಅವಳು ಏಕಪಾಠಿ ಇದ್ದಳಾದ್ದರಿಂದ ತಂದೆ ಮಾಡಿಸ ಬೇಕೆಂದಿದ್ದ ವಿದ್ಯಾಭ್ಯಾಸವನ್ನೆಲ್ಲ ಸಂಪೂರ್ಣವಾಗಿ ಬೇಗನೆ ಮುಗಿಸಿಬಿಟ್ಟಳು. ರೂಪಕ್ಕೆ ತಕ್ಕ ಪಾಂಡಿತ್ಯ! ಬಂಗಾರಕ್ಕೆ ಕುಂದಣ ಕೂಡ್ರಿಸಿದಂತಾಯಿತು! ಇಂತಹ ರೂಪವತಿಯೂ ಚುರುಕು ಬುದ್ಧಿಯವಳೂ ಆದ ಮಗಳಿಗೆ ಯೋಗ್ಯ ವರನನ್ನು ಎಲ್ಲಿಂದ ತರಬೇಕೆಂಬ ಚಿಂತೆಯು ತಂದೆತಾಯಿಗಳಿಗೆ ಬಾಧಿಸಲಿಕ್ಕೆ ಹತ್ತಿತು.

ಒಂದು ದಿನ ಆ ಊರ ಅರಸನಾದ ಕೌಶಿಕನು ಬೇಟೆಯಾಡಿ ಮರಳಿ ಊರಿಗೆ ಬಂದನು. ತನ್ನ ಅರಮನೆಗೆ ಹೋಗುವ ದಾರಿಯಲ್ಲಿ ಈ ಮಹಾ ದೇವಿಯನ್ನು ನೋಡಿ, ಅವಳ ಸೊಬಗು-ಸೌಂದರ್ಯಗಳಿಗೆ ಮರುಳಾಗಿ, ಅವ ಳನ್ನು ತಿರುತಿರುಗಿ ನೋಡುತ್ತ ಮುಂದಕ್ಕೆ ಸಾಗಿದನು. ಅರಮನೆಗೆ ಹೋಗಿ ಲಗುಬಗೆಯಿಂದ ತನ್ನ ಮಂತ್ರಿಗಳನ್ನು ಕರೆಯಿಸಿದನು. ಏನಾದರೂ ಮಾಡಿ ನಿರ್ಮಲನ ಮಗಳನ್ನು ನನ್ನ ರಾಣಿಯನ್ನಾಗಿಮಾಡಲೇಬೇಕೆಂದು ಅವರಿಗೆ

ತಿಳಿಸಿದನು. ಅವರು ಕೂಡಲೆ ನಿರ್ಮಲಶೆಟ್ಟಿಯ ಮನೆಗೆ ಹೋಗಿ ತಮ್ಮ ಒಡೆಯನ ಇಚ್ಛೆಯನ್ನು ಅರುಹಿದರು. ಮಹಾದೇವಿಯು ವೀರಶೈವಳು. ಕೌಶಿಕನು ಜೈನನು. ಇವರಿಬ್ಬರ ವಿವಾಹವು ಹೇಗೆ ತಾನೇ ಸಾಧ್ಯವು? ಒಂದು ಕಡೆ ಕೆರೆ, ಒಂದುಕಡೆ ಬಾವಿಯಾದಂತಾಗಿ ತಂದೆ-ತಾಯಿಗಳಿಬ್ಬರೂ ಒಳ್ಳೆ ಪೇಚಾಟದಲ್ಲಿ ಬಿದ್ದರು! ಈ ಸುದ್ದಿಯನ್ನು ಕೇಳಿ, ಮಹಾದೇವಿಯು ತನ್ನ ದೆಸೆಯಿಂದ ತನ್ನ ತಂದೆ-ತಾಯಿಗಳಿಗೆ ಕೌಶಿಕನಿಂದ ಏನೂ ಅಪಾಯವಾಗಬಾರದೆಂಬ ಉದ್ದೇಶದಿಂದ ತಾನೇ ಅರಮನೆಗೆ ದಿಟ್ಟತನದಿಂದ ನಡೆದಳು. ಅರಸನಿದ್ದೆಡೆಗೆ ಹೋಗಿ ನೀನು ವೀರಶೈವನಾಗುವಂತಿದ್ದರೆ ನಾನು ನಿನ್ನ ಮದುವೆಯಾಗಬಹುದೆಂದು ಹೇಳಿದಳಂತೆ. ಅದಕ್ಕೆ ಅವನು ಒಪ್ಪದೆ ಹೋದನು. ಇದರಿಂದ ತನ್ನ ತಾಯಿ-ತಂದೆಗಳಿಗೆ ಕಷ್ಟವಾಗುವುದೆಂದೆಣಿಸಿ ಅವಳು ಅವರನ್ನೂ ಆ ಊರನ್ನೂ ಬಿಟ್ಟು ವಿರಕ್ತೆಯಾಗಿ ಕಲ್ಯಾಣದತ್ತ ಬಸವಣ್ಣನವರ ಕಡೆಗೆ ಹೊರಟಳು. ಅಲ್ಲಿ ಬಸವಣ್ಣನವರೂ, ಅಲ್ಲಮಪ್ರಭುದೇವರೂ, ಇನ್ನುಳಿದ ಶಿವಶರಣ ಶರಣೆಯರೂ ಅವಳನ್ನು ಅತ್ಯಾದರದಿಂದ ಬರಮಾಡಿಕೊಂಡರು. 'ಅನುಭವ ಮಂಟಪ' ದಲ್ಲಿ ಕಾಲಕಾಲಕ್ಕೆ ಅವಳಿಂದ ಹೊರಹೊಮ್ಮಿದ ಗಹನ ವಿಚಾರಗಳಿಗೂ, ಅವಳಲ್ಲಿ ನೆಲೆಸಿದ ವೈರಾಗ್ಯ-ಭಕ್ತಿ-ಜ್ಞಾನಗಳಿಗೂ, ಹೆಜ್ಜೆ ಹೆಜ್ಜೆಗೂ ಕಂಡು ಬಂದ ಅವಳ ಸದಾಚಾರಕ್ಕೂ ಎಲ್ಲರೂ ತಲೆದೂಗಿದರು! ಆದುದರಿಂದಲೇ ಬಸವಣ್ಣನವರೂ, ಅಲ್ಲಮಪ್ರಭುದೇವರಂತಹ ಹಿರಿ ಅನುಭಾವಿಗಳೂ ಸಹ ಆ ಚಿಕ್ಕ ವಯಸ್ಸಿನ ಮಹಾದೇವಿಗೆ 'ಅಕ್ಕಮಹಾದೇವಿ' ಎಂದು ಸಂಬೋಧಿಸಿದರು! ಅಂದಿನಿಂದ ಅಕ್ಕಮಹಾದೇವಿಯೆಂದೇ ಅವಳು ಹೆಸರಾಗಿರುವಳು. ಆಮೇಲೆ ಕಲ್ಯಾಣ ಪಟ್ಟಣವನ್ನು ಬಿಟ್ಟು ತನ್ನ ನಚ್ಚಿನ ಚೆನ್ನ-ಮಲ್ಲಿಕಾರ್ಜುನನ ದರ್ಶನಕ್ಕೆಂದು ಎಲ್ಲರ ಅನುಮತಿಯಿಂದ ಶ್ರೀಶೈಲಕ್ಕೆ ನಡೆದಳು. ಕೊನೆಗೆ ಮಲ್ಲಿಕಾರ್ಜುನನ ಧ್ಯಾನ ಮಾಡುತ್ತ ಮಾಡುತ್ತ ಅಲ್ಲಿಯೇ ಬಾಳೆಯ ವನದಲ್ಲಿ ಲಿಂಗೈಕ್ಯಳಾದಳು. ತನ್ನ ಪ್ರತಿಯೊಂದು ವಚನದ ಕೊನೆಗೆ ಚೆನ್ನಮಲ್ಲಿಕಾರ್ಜುನನ ನಾಮಸ್ಮರಣೆ ಮಾಡಿರುವಳು.

## ಅಭ್ಯಾಸನಗಳು

೧. ಕೌಶಿಕನಿಂದ ಅವಳ ತಾಯ್ತಂದೆಗಳಿಗೆ ಉಂಟಾದ ಕುತ್ತು ಯಾವದು? ಅದರೊಳಗಿಂದ ಅವಳು ಹೇಗೆ ಪಾರಾದಳು?

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಇವಳ ತಂದೆಯ ಹೆಸರು...........; ತಾಯಿಯ ಹೆಸರು........

(ಆ) ಇವಳು ಮೈಸೂರು ಸೀಮೆಯಲ್ಲಿ................ಎಂಬ ಊರಲ್ಲಿ ಹುಟ್ಟಿದಳು.

(ಇ) ಬೆಳೆಯುತ್ತ ಹೋದಂತೆ, ಅವಳ...... ....ಗಳೂ ಬೆಳೆಯುತ್ತ ನಡೆದವು.

(ಈ ...........ಕ್ಕೆ ತಕ್ಕ ಪಾಂಡಿತ್ಯ ! ಬಂಗಾರಕ್ಕೆ................ ಕೂಡಿಸಿದಂತಾಯಿತು !

(ಉ) ಶ್ರೀಶೈಲದಲ್ಲಿ........ಯ ವನದಲ್ಲಿ ಲಿಂಗೈಕ್ಯಳಾದಳು.

(ಊ) ಪ್ರತಿಯೊಂದು ವಚನದ ಕೊನೆಗೆ....... ....ನ ನಾಮಸ್ಮರಣೆ ಮಾಡಿರುವಳು.

# ೧೭. ವೀರಬಲ್ಲಾಳ

ಇವನು ವಿಷ್ಣುವರ್ಧನನ ಮೊಮ್ಮಗನು. ಅಜ್ಜನಂತೆ ಇವನೂ ದೊಡ್ಡ ಎದೆಗಾರ. ಪಾಂಡ್ಯ, ಕಲಚೂರಿ, ಮತ್ತು ದೇವಗಿರಿ ಯಾದವರನ್ನು ಹಣ್ಣುಗೊಳಿಸಿದ್ದರಿಂದ, ಇವನಿಗೆ 'ವೀರ' ನೆಂಬ ಹೆಸರು ಬಂದಿತು. ಸೊರಟೂರಿನ ಬಳಿಯಲ್ಲಿ ದೇವಗಿರಿ ಯಾದವರ ಭಿಲ್ಲಮನನ್ನೂ ಲಕ್ಕುಂಡಿ ಹತ್ತರ ಯಾದವರ ಜೈತ್ರಸಿಂಹನನ್ನೂ ಪೂರಾ ಸೋಲಿಸಿ ಓಡಿಸಿದ್ದರಿಂದ ಇವನು 'ಕರ್ನಾಟಕದ ಚಕ್ರವರ್ತಿ' ಎನ್ನಿಸಿಕೊಂಡನು. ಇದೇ ಕಾಲಕ್ಕೆ ಲಕ್ಕುಂಡಿಯಲ್ಲಿ ತನ್ನ ಜಯದ ಗುರುತಿಗಾಗಿ ಒಂದು ಅರಮನೆ, ದೇವಾಲಯ ಕಟ್ಟಿಸಿದನು. ಇವನು ಚೋಳರಾಜನ ಕನ್ಯೆಯನ್ನು ಮದುವೆಯಾಗಿದ್ದನು. ಉಚ್ಚಂಗಿದುರ್ಗದಂಥ ಬಲವಾದ ಕೋಟೆಯನ್ನು ಶನಿವಾರ ದಿನ ಗೆದ್ದದ್ದರಿಂದ ಇವನಿಗೆ 'ಗಿರಿದುರ್ಗಮಲ್ಲ' ಮತ್ತು 'ಶನಿವಾರಸಿದ್ಧಿ' ಎಂಬ ಬಿರುದುಗಳು ಉಂಟಾದವು. ಇವನ ಕಾಲಕ್ಕೆ ಹೊಯ್ಸಳರು ಅತ್ಯಂತ ಘನತೆಗೇರಿದರು.

ಕುವರಲಕ್ಷ್ಮ ಎಂಬವನು ಇವನ ಮಂತ್ರಿಯು. ಅವನು ಮೊದಲು ವೀರಬಲ್ಲಾಳನ ಕೈಕೆಳಗಿನ ಆಳು; ಆದರೆ ತನ್ನ ತೇಜದಿಂದಲೂ ಶೌರ್ಯದಿಂದಲೂ

ಅರಸನಿಗೆ ಬಹಳ ಪ್ರೀತಿಯವನಾದನು. ಇವನೆಂದರೆ ವೀರಬಲ್ಲಾಳನ ಪ್ರಾಣ. ಇವನು ಶೂರನಿದ್ದಂತೆ ಅರವತ್ತು ನಾಲ್ಕು ಕಲೆಗಳಲ್ಲಿಯೂ ಜಾಣನಿದ್ದನು. ಇವೆಲ್ಲ ಗುಣಗಳಿಂದ ಲಕ್ಷ್ಮನು ಲಕ್ಷ್ಮದಂಡಾಧಿಪನಾದನು. ಅರಸನು ಇವನಿಗೆ ಕಾಲಲ್ಲಿ ಬಂಗಾರದ ಸರಪಳಿಯನ್ನೂ, ತಲೆಯಲ್ಲಿ ಮುತ್ತಿನ ಗೊಂಡೆಯನ್ನೂ, ಕಿವಿಯಲ್ಲಿ ವೀರ ಬಾವುಲಿಯನ್ನೂ ಹಾಕಿಕೊಳ್ಳುವ ಮರ್ಯಾದೆಯನ್ನು ಕೊಟ್ಟಿದ್ದನು. ವೀರಬಲ್ಲಾಳನಿಗೆ ಇವನು ಪ್ರತಿಯೊಂದು ಕಾಳಗದಲ್ಲಿ ಬೆಂಬಲನಾಗಿರುತ್ತಿದ್ದನು. ಕ್ರಿ.ಶ.೧೨೨೦ ರಲ್ಲಿ ವೀರಬಲ್ಲಾಳನು ಮಡಿದ ಮೇಲೆ ಇವನು ತನ್ನ ಒಂದು ಸಾವಿರ ಕಾಲಾಳುಗಳೊಡನೆ ರುಂಡ ಹಾರಿಸಿಕೊಂಡು ಸತ್ತನು. ವೀರಬಲ್ಲಾಳನೊಡನೆ ಅವನ ರಾಣಿಯರೂ ಸಹಗಮನ ಮಾಡಿದರು. ವೀರಬಲ್ಲಾಳನು ಲಕ್ಕುಂಡಿ, ವಿಜಾಪುರ, ದ್ವಾರಸಮುದ್ರ, ಹಳ್ಳೂರುಗಳನ್ನು ತನ್ನ ರಾಜಧಾನಿಗಳನ್ನಾಗಿ ಮಾಡಿಕೊಂಡಿದ್ದನು.

## ಅಭ್ಯಸನಗಳು

೧. ಕುವರಲಕ್ಷ್ಮನು ಆಳಾಗಿದ್ದವನು ಮಂತ್ರಿಯು ಹೇಗೆ ಆದನೆಂಬ ಬಗೆಗೆ ಸಂಕ್ಷಿಪ್ತವಾಗಿ ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ —

(ಅ) ವೀರಬಲ್ಲಾಳನು........ ... ನ ಮೊಮ್ಮಗನು.

(ಆ) ............ರನ್ನು ಹಣ್ಣುಗೊಳಿಸಿದ್ದರಿಂದ, ಇವನಿಗೆ... .... ... ನೆಂಬ ಹೆಸರು ಬಂತು.

(ಇ) ..................ನ ಬಳಿಯಲ್ಲಿ ದೇವಗಿರಿ ಯಾದವರ............ ನನ್ನೂ................ಹತ್ತಿರ ಯಾದವರ.............ನನ್ನೂ ಪೂರಾ ಸೋಲಿಸಿ ಓಡಿಸಿದ್ದರಿಂದ ಇವನು........ದ ಚಕ್ರವರ್ತಿ ಎನಿಸಿಕೊಂಡನು.

(ಈ) ಇವನು...........ರಾಜನ ಕನ್ಯೆಯನ್ನು ಲಗ್ನವಾಗಿದ್ದನು.

(ಉ) ಉಚ್ಚಂಗಿದುರ್ಗದಂಥ ಬಲವಾದ ಕೋಟೆಯನ್ನು............ .... ದಿನ ಗೆದ್ದದ್ದರಿಂದ ಇವನಿಗೆ .. ........ಮತ್ತು................ಎಂಬ ಬಿರುದುಗಳು ಉಂಟಾದವು.

(ಊ) ವೀರಬಲ್ಲಾಳನು.... .......ಗಳನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು.

# ೧೮. ಶ್ರೀ ಮಧ್ವಾಚಾರ್ಯರು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಡುಪಿಯ ಹತ್ತಿರ ಶಿವನಹಳ್ಳಿ ಎಂಬ ದೊಂದು ಗ್ರಾಮ. ಅಲ್ಲಿ ನಡುಮನೆ ಭಟ್ಟರೆಂಬೊಬ್ಬ ಬ್ರಾಹ್ಮಣರಿದ್ದರು. ಅವರಿಗೆ ಮಧ್ಯಗೇಹಭಟ್ಟರೆಂದೂ ಕರೆಯುತ್ತಿದ್ದರು ಅವರು ತಮ್ಮೂರನ್ನು ಬಿಟ್ಟು ಸಮೀಪದಲ್ಲಿಯೇ ಇದ್ದ ಪಾಜಕವೆಂಬ ಗ್ರಾಮದಲ್ಲಿ ನೆಲೆಸಿ, ಅಲ್ಲಿ ವೇದವತಿ ಎಂಬವಳನ್ನು ಲಗ್ನವಾದರು. ಎಷ್ಟೋ ವರುಷಗಳ ವರೆಗೆ ಮಕ್ಕಳೇ ಆಗಲಿಲ್ಲ. ಕೊನೆಗೆ ಕ್ರಿ. ಶ. ೧೧೯೯ರಲ್ಲಿ ಇವರಿಗೆ ದಸರೆಯ ಹಬ್ಬದ ದಿವಸ ಒಂದು ಗಂಡುಕೂಸು ಹುಟ್ಟಿತು. ಅದರ ಹೆಸರು ವಾಸುದೇವ. ಈ ವಾಸುದೇವನೇ ಮುಂದೆ ಮಧ್ವಾಚಾರ್ಯರೆಂದು ಪ್ರಸಿದ್ಧನಾದನು. ಇವರು ಚಿಕ್ಕವರಿದ್ದಾಗ ಮೈ ಕೈಗಳಿಂದ ಗಟ್ಟಿಗರಾಗಿದ್ದರು ಇವರ ಒಲವು ಆಟಗಳ ಕಡೆಗೆಯೇ ವಿಶೇಷವಾಗಿತ್ತು. ಅಭ್ಯಾಸದ ಕಡೆಗೆ ಅಷ್ಟು ಲಕ್ಷ್ಯವಿರಲಿಲ್ಲ. ಇವರ ನೆನಪಿನ ಶಕ್ತಿಯು ಮಾತ್ರ ಅಗಾಧವಾದದ್ದಿತ್ತು. ಒಮ್ಮೆ ಹೇಳಿಸಿ ಕೊಂಡ ವಿಷಯವನ್ನು ಎಂದೂ ಮರೆಯುತ್ತಿರಲಿಲ್ಲ. ಹತ್ತುವರುಷದವ ರಾಗುವವರೆಗೆ ಗುರುಕುಲವಾಸ ಮಾಡಿದರು. ಆ ಮೇಲೆ ಸನ್ಯಾಸಿಗಳಾಗ ಬೇಕೆಂಬ ಲವಲವಿಕೆಯು ಹುಟ್ಟಿ, ಮನೆಯನ್ನು ಬಿಟ್ಟು ಯಾರಿಗೂ ಹೇಳದೆ ಉಡುಪಿಗೆ ಹೋಗಿ ಅಚ್ಯುತಪ್ರೇಕ್ಷರೆಂಬ ಗುರುಗಳಲ್ಲಿ ನಿಂತುಬಿಟ್ಟರು. ಇವರನ್ನು ನೋಡಿ ಗುರುಗಳಿಗೂ ಬಹಳ ಆನಂದವಾಯಿತು ಮಗನನ್ನು ಹುಡುಕುತ್ತ ಹುಡುಕುತ್ತ ಇವರ ತಂದೆಯು ಅಲ್ಲಿಗೆ ಬಂದು, ಮಗನ ಮನ ಸ್ಸನ್ನು ತಿರುಗಿಸಲು ಬಹು ಹೆಣಗಾಡಿದನು. ಆದರೆ ಅದೆಲ್ಲ ವ್ಯರ್ಥವಾಯಿತು. ಕೊನೆಗೆ, ತಂದೆಗೆ ಇನ್ನೊಬ್ಬ ಮಗನು ಹುಟ್ಟುವ ವರೆಗೆ ವಾಸುದೇವನು ಸನ್ಯಾಸಿಯಾಗಬಾರದೆಂದು ಗುರುಗಳ ಸಮಕ್ಷಮ ನಿರ್ಣಯವಾಯಿತು. ಮುಂದೆ ಸ್ವಲ್ಪೇ ದಿನಗಳಲ್ಲಿ ಅವರ ತಂದೆಗೆ ಒಂದು ಗಂಡು ಕೂಸು ಹುಟ್ಟಿತು. ಈ ಸುದ್ದಿಯನ್ನು ಕೇಳಿ ವಾಸುದೇವರು ತಮ್ಮ ತಾಯಿಯ ಅಪ್ಪಣೆಪಡೆದು ಸನ್ಯಾಸವನ್ನು ಸ್ವೀಕಾರ ಮಾಡಿದರು. ಆಗ ಇವರ ಗುರುಗಳು ಇವರಿಗೆ ಪೂರ್ಣಪ್ರಜ್ಞರೆಂಬ ಹೆಸರನ್ನಿಟ್ಟರು.

ಪೂರ್ಣಪ್ರಜ್ಞರ ಪಾಂಡಿತ್ಯವನ್ನು ಪರೀಕ್ಷಿಸಿ ನೋಡಲು ದೂರ ದೂರ

ದಿಂದ ಪಂಡಿತರು ಬರಹತ್ತಿದರು. ಅವರೆಲ್ಲರೂ ಇವರ ಕೂಡ ವಾದಹಾಕಿ ಸೋತುಹೋಗಲಿಕ್ಕೆ ಹತ್ತಿದರು. ಎಲ್ಲರೂ ಇವರ ಪಾಂಡಿತ್ಯಕ್ಕೆ ತಲೆದೂಗಿದರು. ಗುರುಗಳಾದ ಅಚ್ಯುತಪ್ರೇಕ್ಷರು ಗುರುಪೀಠಕ್ಕೆ ಇವರೇ ಯೋಗ್ಯರೆಂದು ನಿರ್ಣಯಿಸಿ ಇವರನ್ನು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಗಟ್ಟಿದರು. ಇವರೇ ಮುಂದೆ ಮಧ್ವಾಚಾರ್ಯರೆಂದು ಹೆಸರಾದರು. 'ದೇವರೂ ಜೀವನೂ ಒಂದೇ' ಎಂಬ ಶಂಕರಾಚಾರ್ಯರ ಮತವನ್ನು ಇವರು ಖಂಡಿಸಿದರು "ಜೀವನು ಸೇವಕ, ದೇವರು ಒಡೆಯ" ಎಂಬ ಭಕ್ತಿ ಮಾರ್ಗವನ್ನು ಜನರಿಗೆ ಹೋದಲ್ಲೆಲ್ಲ ತೋರಿಸಿ ಕೊಟ್ಟರು. ಇದಕ್ಕೆ ದ್ವೈತಮತವೆನ್ನುತ್ತಾರೆ. ಈ ಮತದ



ಶ್ರೀಮನ್ ಮಧ್ವಾಚಾರ್ಯರು

ತತ್ವಗಳನ್ನು ಜನರಲ್ಲಿ ಪ್ರಸಾರ ಮಾಡಲಿಕ್ಕೆಂದು ದಿಗ್ವಿಜಯವನ್ನು ಕೈಕೊಂಡರು. ದಕ್ಷಿಣ ಭಾರತದಲ್ಲಿಯೂ, ಉತ್ತರ ಭಾರತದಲ್ಲಿಯೂ ತಿರುಗಾಡಿ ಹೋದಲ್ಲೆಲ್ಲ ತಮ್ಮ ಮತದ ಸಿದ್ಧಾಂತಗಳನ್ನು ಜನರಿಗೆ ಮನಗಾಣಿಸಿ

ಕೊಟ್ಟರು. ತಮ್ಮ ಕೂಡ ವಾದಹಾಕಲು ಬಂದ ಪಂಡಿತರನ್ನೆಲ್ಲ ಗೆದ್ದು, ಅವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡುಬಿಟ್ಟರು. ಉಡುಪಿಯಲ್ಲಿ ಒಂದು ಗುಡಿಯನ್ನು ಕಟ್ಟಿಸಿ ಅದರಲ್ಲಿ ಶ್ರೀಕೃಷ್ಣನ ಮೂರ್ತಿಯನ್ನು ಸ್ಥಾಪಿಸಿದರು. ಅಂದಿನಿಂದ ಉಡುಪಿಯು ವೈಷ್ಣವರಿಗೆ ಪವಿತ್ರ ಸ್ಥಳವಾಯಿತು. ಇವರು ಮ್ಮ ಜೀವಮಾನದಲ್ಲಿ ಒಟ್ಟಿಗೆ ಮೂಲ ಮೂವತ್ತೇಳು ಗ್ರಂಥಗಳನ್ನು ಬರೆದಿದ್ದಾರೆ. ಇವರು ಎಂಬತ್ತು ವರುಷ ಬಾಳಿ ಕ್ರಿ. ಶ. ೧೨೭೮ ರಲ್ಲಿ ಶ್ರೀಬದರಿಕಾಶ್ರಮಕ್ಕೆ ತೆರಳಿದರು.

## ಅಭ್ಯಾಸನಗಳು

೧. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ.

(ಅ) ಇವರ ತಂದೆಯ ಹೆಸರು..................ಭಟ್ಟ; ತಾಯಿಯ ಹೆಸರು..

(ಆ) ಇವರು ವರುಷದವರಾದ ಮೇಲೆ........ ...ಯು ಆಗಬೇಕೆಂಬ ಲವಲವಿಕೆಯು ಹುಟ್ಟಿತು.

(ಇ) ಮನೆಯಲ್ಲಿ ಯಾರಿಗೂ ಹೇಳದೆ...........ಗೆ ಹೋಗಿ, ಅಲ್ಲಿ ........ಎಂಬ ಗುರುಗಳಲ್ಲಿ ನಿಂತುಬಿಟ್ಟರು.

(ಈ) ವಾಸುದೇವರು ..........ಅಪ್ಪಣೆ ಪಡೆದು.... ........ಸ್ವೀಕಾರ ಮಾಡಿದರು.

(ಉ) ಸನ್ಯಾಸವನ್ನು ಸ್ವೀಕಾರ ಮಾಡಿದ ಮೇಲೆ ಇವರಿಗೆ............ರೆಂಬ ಹೆಸರನ್ನಿಟ್ಟರು.

(ಊ) ........ಪೀಠಕ್ಕೆ ಸ್ವಾಮಿಗಳಾದ ಮೇಲೆ ಇವರು...............ರೆಂಬ ಹೆಸರಾದರು.

(ಎ) ..................ಯಲ್ಲಿ ಗುಡಿಯನ್ನು ಕಟ್ಟಿಸಿ, ಅದರೊಳಗೆ ........ನ ಮೂರ್ತಿಯನ್ನು ಸ್ಥಾಪಿಸಿದರು.

(ಏ) ಇವರು.... ...ಗ್ರಂಥಗಳನ್ನು ಬರೆದಿದ್ದಾರೆ.

(ಐ) ಇವರು...............ವರುಷ ಬಾಳಿ ಕ್ರಿ. ಶ...............ರಲ್ಲಿ ಶ್ರೀ ಬದರಿಕಾಶ್ರಮಕ್ಕೆ ತೆರಳಿದರು.

# ೧೯. ಶ್ರೀ ವಿದ್ಯಾರಣ್ಯರು

ಇವರು ಕರ್ನಾಟಕದಲ್ಲಿ ಜನಿಸಿದ ಮಹಾಪುರುಷರಲ್ಲಿ ಒಬ್ಬರು. ಹಂಪೆಯ ಸಮೀಪದಲ್ಲಿರುವ ಆನೇಗುಂದಿಯು ಇವರ ಜನ್ಮಸ್ಥಳ. ಅಲ್ಲಿ ೧೩ನೆಯ ಶತಮಾನದ ಕೊನೆಯ ಮತ್ತು ೧೪ನೆಯ ಶತಮಾನದ ಆದಿಯ ಸುಮಾರಿಗೆ ಮಾಯಣ ಭಟ್ಟನೆಂಬ ಒಬ್ಬ ವಿದ್ವಾಂಸನಾದ ಬಡ ಬ್ರಾಹ್ಮಣ ನಿದ್ದನು. ಅವನ ಹೆಂಡತಿ ಶ್ರೀಮತಿ. ಮಾಯಣಭಟ್ಟನು ತನ್ನ ಮನೆಯಲ್ಲಿಯೇ ವಿದ್ಯಾರ್ಥಿಗಳಿಗೆ ಸಂಸ್ಕೃತವನ್ನು ಕಲಿಸಿ ತನ್ನ ಉಪಜೀವನವನ್ನು ಹೇಗೋ ಸಾಗಿಸುತ್ತಿದ್ದನು. ಅವನಿಗೆ ಮಾಧವ, ಸಾಯಣ, ಸೋಮನಾಥ (ಇಲ್ಲವೆ ಭೋಗನಾಥ) ರೆಂಬ ಮೂವರು ಮಕ್ಕಳಿದ್ದರು. ಮಾಧವನೇ ಹಿರಿಯನು. ಮಾಧವನು ಮುಂದೆ ತನ್ನ ವಿದ್ಯಾಪ್ರಭಾವದಿಂದ ವಿದ್ಯಾರಣ್ಯರೆಂದು ಕರೆಯಲ್ಪಡಹತ್ತಿದನು.

ಮಾಯಣಭಟ್ಟನು ತನ್ನ ಮಕ್ಕಳಿಗೆ ವೇದ-ಶಾಸ್ತ್ರ ಮೊದಲಾದವುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿಸಿ ಅವರನ್ನೆಲ್ಲ ಪಂಡಿತರನ್ನಾಗಿ ಮಾಡಿದನು. ಕೆಲ ದಿನಗಳ ತರುವಾಯ ತೀರ ಬಡತನದಲ್ಲಿಯೇ ಅವನು ತೀರಿಕೊಂಡನು. ಮನೆತನದ ಬಡತನವು ಮತ್ತಿಷ್ಟು ಬೆಳೆದು, ಅದರ ಭಾರವೆಲ್ಲ ಹಿರಿಯ ಮಗನಾದ ಮಾಧವನ ಮೇಲೆಯೇ ಬಿದ್ದಿತು. ಈ ಬಡತನದ ಬವಣೆಯನ್ನು ಹಿಂಗಿಸುವ ಮಾರ್ಗವು ವಿದ್ಯಾರಣ್ಯರಿಗೆ ತೋಚಲಿಲ್ಲ. ಅವರು ಹಂಪೆಗೆ ಹೋಗಿ ತಮ್ಮ ಕುಲದೇವತೆಯಾದ ಭುವನೇಶ್ವರಿಯನ್ನು ಕುರಿತು ಹನ್ನೆರಡು ವರ್ಷ ತಪಸ್ಸು ಮಾಡಿದರು. ಭುವನೇಶ್ವರಿಯ ಅನುಗ್ರಹವನ್ನು ಪಡೆದು, ಸನ್ಯಾಸವನ್ನು ಸ್ವೀಕರಿಸಿ ಶೃಂಗೇರಿಗೆ ನಡೆದರು. ಅವರ ತಮ್ಮಂದಿರಾದ ಸಾಯಣ–ಸೋಮನಾಥರು ಈ ಮೊದಲೇ ಶೃಂಗೇರಿ ಮಠಕ್ಕೆ ಹೋಗಿ ಸನ್ಯಾಸಿಗಳಾಗಿದ್ದರು.

ಆ ಸಮಯದಲ್ಲಿ ಉತ್ತರಭಾರತದಿಂದ ಬಂದ ಮುಸಲ್ಮಾನ ಅರಸನಾದ ಅಲ್ಲಾವುದ್ದೀನ ಖಿಲಜಿಯ ದಾಳಿಯ ಹೊಡೆತಕ್ಕೆ ಗುರಿಯಾದ ಹೊಯ್ಸಳರ ರಾಜ್ಯವೆಲ್ಲ ನಾಶವಾಗಿ ಹರಿಹರ ಮೊದಲಾದ ಪ್ರಮುಖ ನಾಯಕರು ನಿರಾಶ್ರಿತರಾಗಿದ್ದರು. ಒಂದು ಬಲವಾದ ಹಿಂದೂ ಸಾಮ್ರಾಜ್ಯವನ್ನು ಕಟ್ಟಿ ಮುಸಲ್ಮಾನರ ಹಾವಳಿಯನ್ನು ತಡೆಗಟ್ಟಬೇಕೆಂದು ಹರಿಹರನು ಹಗಲೂ ರಾತ್ರಿಯೂ

ಚಿಂತಿಸುತ್ತಿದ್ದನು. ಅವನು ಶೃಂಗೇರಿಗೆ ಹೋಗಿ ಶ್ರೀ ವಿದ್ಯಾರಣ್ಯರನ್ನು ಕಂಡು ಅವರಿಂದ ಆಶೀರ್ವಾದವನ್ನು ಪಡೆದನು. ಶ್ರೀ ವಿದ್ಯಾರಣ್ಯರು ಶೃಂಗೇರಿಯಿಂದ ಹಂಪೆಗೆ ಬಂದು ಅದಕ್ಕೆ 'ವಿಜಯನಗರ' ಎಂದು ಹೆಸರಿಟ್ಟು ಸುತ್ತುಮುತ್ತಲಿನ ಹಿಂದೂ ಅರಸರಿಗೆಲ್ಲ ಸಹಾಯ–ಸಹಕಾರಗಳನ್ನು ನೀಡಲು ಕೇಳಿಕೊಂಡರು.



ಹರಿಹರರಾಯನು ಶ್ರೀ ವಿದ್ಯಾರಣ್ಯರ ದರ್ಶನಕ್ಕೆ ಬಂದದ್ದು

ಹರಿಹರರಾಯನನ್ನು ಪಟ್ಟಕ್ಕೆಕುಳ್ಳಿರಿಸಿ, ತಾವು ಅವನ ಮಾರ್ಗದರ್ಶಕರಾದರು. ಹರಿಹರನು ವಿದ್ಯಾರಣ್ಯರಿಗೆ 'ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಕೊಟ್ಟನು.

ವಿಜಯನಗರದಲ್ಲಿ ಎಲ್ಲವೂ ಸುಸೂತ್ರವಾಗಿ ಸಾಗಲಿಕ್ಕೆ ಹತ್ತಿದ ಮೇಲೆ ವಿದ್ಯಾರಣ್ಯರು ಶೃಂಗೇರಿಗೆ ದಯಮಾಡಿಸಿದರು. ಅಲ್ಲಿ ತಮ್ಮ ತಮ್ಮನಾದ ಸಾಯಣಾಚಾರ್ಯರನ್ನು ಸಹಾಯಕ್ಕೆ ಕರೆದುಕೊಂಡು ಉತ್ತಮವಾದ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆದರು. ಇವರ ಗ್ರಂಥಗಳೆಲ್ಲ ಸಂಸ್ಕೃತದಲ್ಲಿಯೇ ಇರುವವು ಕ್ರಿ. ಶ. ೧೩೮೬ ರಲ್ಲಿ ಸ್ವರ್ಗಸ್ಥರಾದರು.

## ಅಭ್ಯಸನಗಳು

೧. ಕೆಳಗೆ ಕೆಲವು ಅಪೂರ್ಣ ವಾಕ್ಯಗಳಿವೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದ ಒಂದು ಶಬ್ದವನ್ನು ಆಯ್ದುಕೊಂಡು ವಾಕ್ಯವನ್ನು ಪೂರ್ಣ ಮಾಡಿರಿ.

(ಅ) ಇವರ ತಂದೆಯ ಹೆಸರು..................ಭಟ್ಟ. (ಮಾಯಣ, ಸಾಯಣ)

(ಆ) ಇವರ ತಾಯಿಯ ಹೆಸರು...........(ಸುಮತಿ, ಶ್ರೀಮತಿ)

(ಇ) ಇವರು ಭುವನೇಶ್ವರಿಯನ್ನು ಕುರಿತು..................ವರುಷ ತಪಸ್ಸು ಮಾಡಿದರು. (೧೦, ೧೨, ೧೪)

(ಈ) ......................ಖಿಲಜಿಯ ದಾಳಿಯಿಂದ ಹೊಯ್ಸಳರ ರಾಜ್ಯವೆಲ್ಲ ನಾಶವಾಯಿತು. (ಜಲಾಲುದ್ದೀನ, ಶಹಾಬುದ್ದೀನ, ಅಲ್ಲಾ ಉದ್ದೀನ)

(ಉ) ಇವರು ಕ್ರಿ. ಶ............ರಲ್ಲಿ ಸ್ವರ್ಗಸ್ಥರಾದರು. (೧೩೮೬, ೧೩೭೬, ೧೩೬೬)

೨. ವಿದ್ಯಾರಣ್ಯರಿಗೆ 'ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದು ಏಕೆ ಸಿಕ್ಕಿತು?

---

# ೨೦. ಹರಿಹರರಾಯನು

ಇವನು ವಿಜಯನಗರ ರಾಜ್ಯದ ಮೂಲ ಸಂಸ್ಥಾಪಕನು. ಇವನನ್ನು ಹುಕ್ಕನೆಂದೂ ಕರೆಯುತ್ತಾರೆ. ಇವನಿಗೆ ಬುಕ್ಕ, ಕಂಪಣ್ಣ, ಮಾರಪ್ಪ, ಮುದ್ದಪ್ಪ ಎಂಬ ನಾಲ್ವರು ಸಹೋದರರು. ಇವರು ಯಾದವ ವಂಶದ ಸಂಗಮರಾಜನ ಮಕ್ಕಳು. ಹರಿಹರನ ಪೂರ್ವಜರು ಓರಂಗಲ್ಲಿನ ಕಾಕತೀಯರಲ್ಲಿ ಹಾಗೂ ಹೊಯ್ಸಳರಲ್ಲಿ ದ್ವಾರಪಾಲಕರಾಗಿದ್ದರು. ಹರಿಹರನು ವೀರನಿದ್ದುದರಿಂದ ಹೊಯ್ಸಳ ರಾಜರಲ್ಲಿ ದಂಡನಾಯಕನಾಗಿದ್ದನು. ಅಲ್ಲಾ ಉದ್ದೀನ ಖಿಲಜಿಯ ಸರದಾರನಾದ ಮಲಿಕ್‌ಕಾಫುರನು ದಕ್ಷಿಣದಲ್ಲಿ ದಾಳಿ ಮಾಡಿ ಹೊಯ್ಸಳರ ರಾಜ್ಯವನ್ನೆಲ್ಲ ಹಾಳು ಮಾಡಿ ಬಿಟ್ಟಿದ್ದರಿಂದ ಅವರಲ್ಲಿದ್ದ

ವೀರರೆಲ್ಲರೂ ನಿರಾಧಾರಿಗಳಾಗಿದ್ದರು. ಹರಿಹರನು ಅವರಿಗೆಲ್ಲ ಪ್ರಮುಖ ನಾಗಿದ್ದನು. ಉತ್ತರ ಭಾರತದಿಂದ ಮೇಲಿಂದ ಮೇಲೆ ಬರುತ್ತಿದ್ದ ಮುಸಲ್ಮಾನರ ಹಾವಳಿಯನ್ನು ತಡೆಗಟ್ಟಲು ಉಪಾಯಗಳನ್ನು ಅವನು ಯಾವಾಗಲೂ ಯೋಚಿಸುತ್ತಿದ್ದನು. ಕೊನೆಗೆ ದಕ್ಷಿಣ ಭಾರತದಲ್ಲಿ ಒಂದು ಬಲವಾದ ಹಿಂದೂ ರಾಜ್ಯವನ್ನು ಕಟ್ಟುವದೊಂದೇ ಉತ್ತಮ ಉಪಾಯವೆಂದು ನಿಶ್ಚಯಿಸಿದನು. ಈ ಮಹತ್ಕಾರ್ಯದಲ್ಲಿ ಶ್ರೀ ವಿದ್ಯಾರಣ್ಯರ ಆಶೀರ್ವಾದವನ್ನೂ ಸಲಹೆಯನ್ನೂ ಪಡೆಯಲು ತನ್ನ ತಮ್ಮನಾದ ಬುಕ್ಕನನ್ನು ಕರಕೊಂಡು ಶೃಂಗೇರಿಗೆ ಹೋದನು. ಇಬ್ಬರೂ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕುಳಿತರು.

ವಿದ್ಯಾ:— ಹುಕ್ಕ-ಬುಕ್ಕರೇ, ಇಷ್ಟು ದೂರ ಈಗೇಕೆ ಬಂದಿರುವಿರಿ?

ಹುಕ್ಕ:—ಮಹಾಸ್ವಾಮಿ, ಉತ್ತರ ಭಾರತದ ಮುಸಲ್ಮಾನರ ಹಾವಳಿಯಿಂದ ದಕ್ಷಿಣ ಭಾರತದ ಹಿಂದೂ ರಾಜ್ಯಗಳೆಲ್ಲ ಮಣ್ಣು ಮುಕ್ಕಿ ಬಿಟ್ಟವೆ. ಆದುದರಿಂದ ಅವರ ಹಾವಳಿಯನ್ನು ತಡೆಯಲು ಒಂದು ಬಲವಾದ ಹಿಂದೂ ರಾಜ್ಯವನ್ನು ಸ್ಥಾಪಿಸಬೇಕೆಂದು ನಮ್ಮ ಹೆಬ್ಬಯಕೆ. ಈಗ ನಾವು ಸುಮ್ಮನೆ ಕೈಕಟ್ಟಿಕೊಂಡು ಕುಳಿತರೆ ಹಿಂದೂ ಧರ್ಮವೇ ಉಳಿಯಲಿಕ್ಕಿಲ್ಲ.

ವಿದ್ಯಾ:— ನಾವು ಹೇಳಿ ಕೇಳಿ ಸನ್ಯಾಸಿಗಳು; ಇವರಲ್ಲಿ ನಾವು ಮಾಡುವದೇನಿದೆ?

ಬುಕ್ಕ:— ತಮ್ಮಂತಹ ಪೂಜ್ಯ-ಗುರುಗಳ ಅನುಗ್ರಹ-ಆಶೀರ್ವಾದಗಳು ಬೇಕಲ್ಲವೇ?

ವಿದ್ಯಾ:— ಒಳ್ಳೇದು, ನಮ್ಮ ಅನುಗ್ರಹ-ಆಶೀರ್ವಾದಗಳು ನಿಮ್ಮ ಮೇಲೆ ಇದ್ದೇ ಇವೆ. ಆದರೂ ನೀವು ಈಗ ಕೈಹಾಕಬೇಕೆನ್ನುವ ಕೆಲಸವು ಬಲು ಸಾಹಸದ್ದು! ಅದು ಕೆಚ್ಚೆದೆಯ ವೀರರ ಕೆಲಸ!

ಹುಕ್ಕ:— ಹೌದು ಮಹಾಸ್ವಾಮಿ, ತಾವು ಅನ್ನುವದು ನಿಜ. ಈ ಸಾಹಸದ ಕೆಲಸದ ಹೊಣೆಯನ್ನು ಹೊರಲು ನಾವಿಬ್ಬರೂ ಧೈರ್ಯ ಮಾಡಿದ್ದೇವೆ. ನಮಗೆ ನಮ್ಮ ನಾಡಿನ ವೀರರೆಲ್ಲರ ಸಹಕಾರವೂ ಸಾಕಷ್ಟಿದೆ. ಆದರೂ ಕಾಲಕಾಲಕ್ಕೆ ತಮ್ಮಂತಹ ಪೂಜ್ಯರ ಸಲಹೆ-ಸೂಚನೆಗಳೂ, ಮಾರ್ಗದರ್ಶನವೂ ಹಿತೋಪದೇಶವೂ ಇರಬೇಕಲ್ಲವೆ?

ವಿದ್ಯಾ:—ಒಳ್ಳೇದು, ಹಾಗೆಯೇ ಆಗಲಿ! ನಮ್ಮಿಂದ ಶಕ್ಯವಿದ್ದಷ್ಟೆಲ್ಲ ಸಹಾಯವನ್ನು ನೀಡಲು ಸದಾ ಸಿದ್ಧರಿದ್ದೇವೆ.

ಇಷ್ಟಾದಮೇಲೆ ವಿದ್ಯಾರಣ್ಯರು ಹಂಪೆಗೆ ಬಂದು ತುಂಗಭದ್ರಾ ದಂಡೆಯ ಮೇಲೆ ಆನೆಗುಂದಿಯ ಎದುರಿಗೆ ಕ್ರಿ. ಶ. ೧೩೩೫ ರಲ್ಲಿ 'ವಿಜಯನಗರ' ಎಂಬ ರಾಜ್ಯವನ್ನು ಸ್ಥಾಪಿಸಿ, ಪಟ್ಟಕ್ಕೆ ಹರಿಹರನನ್ನು ಕ್ರಿ. ಶ. ೧೩೩೬ ರಲ್ಲಿ



ಶ್ರೀ ವಿದ್ಯಾರಣ್ಯರು ಹರಿಹರನನ್ನು ಪಟ್ಟಕ್ಕೆ ಕೂಡ್ರಿಸಿದ್ದು

ಕುಳ್ಳಿರಿಸಿ ಅವನ ಉಪದೇಶಕರಾಗಿ ಅಲ್ಲಿ ಕೆಲಕಾಲ ನಿಂತರು. ಸುತ್ತು ಮುತ್ತಲಿನ ಹಿಂದೂ ಅರಸರಿಗೆಲ್ಲ ಹರಿಹರರಾಯನಿಗೆ ಸಹಾಯ-ಸಹಕಾರಗಳನ್ನು ಸಲ್ಲಿಸಲು ಅಪ್ಪಣೆ ಕೊಡಿಸಿದರು.

ಹರಿಹರರಾಯನು ತನ್ನ ಎರಡನೆಯ ತಮ್ಮನಾದ ಬುಕ್ಕರಾಯನನ್ನು ತನ್ನ ಯುವರಾಜ ಮತ್ತು ಸೇನಾಪತಿಯನ್ನಾಗಿ ಮಾಡಿ‡ಹತ್ತರ ಇಟ್ಟುಕೊಂಡು ಉಳಿದ ತಮ್ಮಂದಿರನ್ನು ದಿಗ್ವಿಜಯಕ್ಕೆ ಕಳಿಸಿದನು.‡ಕಂಪಣ್ಣನು ಕಡಪೆ ನೆಲ್ಲೂರುಗಳ ಕಡೆಗೂ ಮಾರಪ್ಪನು ಬನವಾಸಿಗೂ ದಂಡು ತಕ್ಕೊಂಡು ಹೋಗಿ

ಅವುಗಳನ್ನು ಗೆದ್ದುಕೊಂಡರು. ಅವರನ್ನು ಆ ಆ ನಾಡುಗಳಿಗೆ ಮಹಾಮಂಡಲೇಶ್ವರರನ್ನಾಗಿ ನಿಯಮಿಸಿದನು. ಇವನು ಬಾದಾಮಿಯ ಕೋಟೆಯನ್ನು ಕಟ್ಟಿಸಿದನು. ಓರಂಗಲ್ಲಿನ ಅರಸುಮಗ ಕೃಷ್ಣನು ಇವನ ಸಹಾಯದಿಂದ ಓರಂಗಲ್ಲನ್ನು ಹಿಡಿದುಕೊಂಡಿದ್ದ ಮುಸಲ್ಮಾನರನ್ನು ಹೊಡೆದೋಡಿಸಿದನು. ಇವನ ಕಾಲಕ್ಕೆ ವಿಜಯನಗರವು ಸಾಮ್ರಾಜ್ಯ ಪದವಿಯನ್ನು ಹೊಂದಿತು.



ಹಂಪೆಯ ವಿರೂಪಾಕ್ಷ ದೇವಾಲಯದ ಒಂದು ನೋಟ

ಹಂಪೆಯಲ್ಲಿರುವ ವಿರೂಪಾಕ್ಷದೇವರ ಗುಡಿಯನ್ನು ವಿಸ್ತರಿಸಿ ಕಟ್ಟಿಸಿದನು. ಇವನು ಕ್ರಿ. ಶ. ೧೩೫೩ ರಲ್ಲಿ ತೀರಿಕೊಂಡನು. ಇವನಿಗೆ ಇಬ್ಬರು ಮಕ್ಕಳಿದ್ದರು; ಅವರು ಬೇಗ ತೀರಿಕೊಂಡದ್ದರಿಂದ, ಹರಿಹರನ ತರುವಾಯ ಬುಕ್ಕರಾಯನು ಪಟ್ಟವೇರಿದನು. ಈ ಸಾಮ್ರಾಜ್ಯವು ಸುಮಾರು ೩೦೦ ವರುಷಗಳವರೆಗೆ ಬಾಳಿತು.

## ಅಭ್ಯಸನಗಳು

೧. ವಿದ್ಯಾರಣ್ಯರು ಮತ್ತು ಹುಕ್ಕ-ಬುಕ್ಕ ಇವರ ನಡುವೆ ಆದ ಸಂಭಾಷಣವನ್ನು ಬರೆಯಿರಿ.

೨. ಕೆಳಗೆ ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದನ್ನು ಆಯ್ದು ವಾಕ್ಯವನ್ನು ಪೂರ್ಣ ಮಾಡಿ ಬರೆಯಿರಿ.

(ಅ) ಹರಿಹರನು..............ವಂಶದ ಸಂಗಮರಾಜನ ಮಗನು. (ಕದಂಬ, ಚಾಲುಕ್ಯ, ಯಾದವ)

(ಆ) ಇವನು ಶೂರನಿದ್ದುದರಿಂದ ಹೊಯ್ಸಳರಲ್ಲಿ..............ಆಗಿದ್ದನು. (ಸರದಾರ, ದಂಡನಾಯಕ, ಭಾಂಡಾರಿ)

(ಇ) ವಿಜಯನಗರದ ರಾಜ್ಯವು ಕ್ರಿ. ಶ...........ರಲ್ಲಿ ಸ್ಥಾಪಿಸಲ್ಪಟ್ಟಿತು. (೧೩೩೬, ೧೩೨೬, ೧೩೪೬)

(ಈ) ಇವನು ತನ್ನ ತಮ್ಮನಾದ..............ನನ್ನು ಯುವರಾಜ ಮತ್ತು ಸೇನಾಪತಿಯನ್ನಾಗಿ ನಿಯಮಿಸಿದನು. (ಕಂಪಣ್ಣ, ಮುದ್ದಣ್ಣ, ಬುಕ್ಕ, ಮಾರಪ್ಪ)

(ಉ) ಇವನು ಕ್ರಿ. ಶ..............ರಲ್ಲಿ ತೀರಿಕೊಂಡನು. (೧೩೫೩, ೧೨೫೩)

# ೨೧. ಬುಕ್ಕರಾಯನು

ಇವನು ಹರಿಹರರಾಯ (ಹುಕ್ಕ) ನ ಎರಡನೆಯ ತಮ್ಮನು. ಇವನಿಗಿಂತ ಹಿರಿಯವನಾದ ಕಂಪಣ್ಣನು ಈ ಮೊದಲೇ ಮಡಿದದ್ದರಿಂದ ಇವನಿಗೆ ಪಟ್ಟವಾಯಿತು. ವಿಜಯನಗರ ರಾಜ್ಯದ ಮೂಲ ಸ್ಥಾಪಕರಲ್ಲಿ ಇವನೊಬ್ಬನು. ತನ್ನ ೨೪ ವರುಷಗಳ ಆಳಿಕೆಯಲ್ಲಿ ಇವನು ಮುಸಲ್ಮಾನರ ದಾಳಿಗಳನ್ನು ಮುರಿದು, ತುಂಗಭದ್ರೆಯಿಂದ ದಕ್ಷಿಣ ಸಮುದ್ರದವರೆಗೆ ರಾಜ್ಯವನ್ನು ಹಬ್ಬಿಸಿದನು. ಓರಂಗಲ್ಲು, ದ್ವಾರಸಮುದ್ರದ ಅರಸರನ್ನೆಲ್ಲ ಒಂದುಗೂಡಿಸಿ ತನ್ನ ಸಹಾಯಕರನ್ನಾಗಿ ಮಾಡಿಕೊಂಡನು. ಇವನ ಕಾಲಕ್ಕೂ ಶ್ರೀ ವಿದ್ಯಾರಣ್ಯರೇ ಅರಸುಮನೆತನದ ಗುರುಗಳಾಗಿದ್ದರು. ಇವನ್ನ ದಂಡನಾಯಕನಾದ ಬಸವಯ್ಯನು ವೀರಶೈವನಿದ್ದನು. ಇನ್ನೊಬ್ಬ ದಂಡೇಶನಾದ ಇರುಗನು ಜೈನ

ನಾಗಿದ್ದನು. ಈತನ ಆಳಿಕೆಯಲ್ಲಿ ಜೈನ ಮತ್ತು ವೈಷ್ಣವರಲ್ಲಿ ಜಗಳವೆದ್ದಿತು. ಆಗ ತಮ್ಮ ತಮ್ಮ ಮತಕ್ಕೆ ತಾವು ಶ್ರೇಷ್ಠರೆಂದು ಹೇಳಿ ಜಗಳ ಮುರಿದನು. ಇವನು ಎಲ್ಲರನ್ನೂ ಸಮನಾಗಿಯೇ ನಡೆಯಿಸಿಕೊಳ್ಳುತ್ತಿದ್ದನು. ಇವನಿಗೆ ನಾಲ್ಕು ಮಂದಿ ಮಕ್ಕಳಿದ್ದರು. ಇಮ್ಮಡಿ ಕಂಪಣ್ಣನೆಂಬೊಬ್ಬ ಮಗನು ಮಧುರೆಯ ವರೆಗೆ ಹೋಗಿ ಅಲ್ಲಿಯ ಸುಲ್ತಾನನನ್ನು ಸೋಲಿಸಿ, ರಾಮೇಶ್ವರದ ವರೆಗೆ ಕನ್ನಡಿಗರ ಧ್ವಜವನ್ನು ಹಾರಿಸಿದ ಸಂಗತಿಯನ್ನು ಕಂಪಣ್ಣನ ರಾಣಿಯಾದ ಗಂಗಾದೇವಿಯು ಸಂಸ್ಕೃತದಲ್ಲಿ ಪದ್ಯರೂಪವಾಗಿ ಬರೆದಿರುವಳು. ಬುಕ್ಕನು ತನ್ನ ಹೆಸರಿನಿಂದ ಒಂದು ಪಟ್ಟಣವನ್ನೂ ಒಂದು ಹೆಗ್ಗೆರೆಯನ್ನೂ ಕಟ್ಟಿಸಿದನು. ವಿದ್ಯಾರಣ್ಯರ ತಮ್ಮಂದಿರೂ, ಪಂಡಿತರೂ, ಕಡುಗಲಿಗಳೂ ಆದ ಸಾಯಣಾಚಾರ್ಯರು ವೇದಕ್ಕೆ ಭಾಷ್ಯ (ಅರ್ಥ) ವನ್ನು ಬರೆದರು.

ಈ ಕಾಲಕ್ಕೆ ಕಲಬುರ್ಗಿಯಲ್ಲಿ ಬಹಮನಿ ಮನೆತನದ ಮುಹಮ್ಮದ ಶಹನು ಆಳುತ್ತಿದ್ದನು. ವಿಜಯನಗರದ ರಾಜ್ಯದ ಬೆಳವಣಿಗೆಯನ್ನು ಕಂಡು ಅವನಿಗೆ ಸಹನವಾಗದೆ, ಏನಾದರೂ ಮಾಡಿ ಕಾಲು ಕೆದರಿ ಜಗಳ ತೆಗೆಯಬೇಕೆಂದು ಮಾಡಿದನು. ಒಂದು ದಿನ ಅವನು ಶೆರೆ ಕುಡಿದು ಕುಳಿತಾಗ ತನ್ನ ಓಲಗದಲ್ಲಿ ಒಬ್ಬ ಹಾಡುಗಾರನನ್ನು ಕರೆಯಿಸಿ ಹಾಡಿಸಿದನು. ಅವನಿಗೆ ಇಂತಿಷ್ಟು ಹಣವನ್ನು ಕೊಡಬೇಕೆಂದು ಬುಕ್ಕ ಭೂಪತಿಗೆ ಪತ್ರಬರೆದು ಕಳಿಸಿದನು. ಹೀಗೆ ಮಾಡಬೇಡಿರೆಂದು ಅವನ ಸುತ್ತಲಿದ್ದವರು ಎಷ್ಟು ಹೇಳಿದರೂ ಕೇಳಲಿಲ್ಲ. ಇದರಿಂದ ಬುಕ್ಕಭೂಪತಿಗೆ ಅಪಮಾನ ಮಾಡಿದಂತಾಯಿತು. ಆದರಿಂದ ಅವನು ಆ 'ಹೆಂಡದ ಹುಂಡಿ' ಯನ್ನು ತಂದ ಹಾಡುಗಾರನನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಊರೆಲ್ಲ ಮೆರೆಯಿಸಿ ಕಳಿಸಿದನು. ಇದಲ್ಲದೆ ಅಪಮಾನದ ಸೇಡಿಗಾಗಿ ಕಲಬುರ್ಗಿಯ ರಾಜ್ಯಕ್ಕೆ ಸೇರಿದ ಮುದಗಲ್ಲು ಕೋಟೆಯ ಮೇಲೆ ದಂಡೆತ್ತಿ ಹೋಗಿ ಅದನ್ನು ಹಿಡಿದುಕೊಂಡು, ಅಲ್ಲಿ ಅನೇಕರನ್ನು ಕೊಂದನು. ಈ ಸುದ್ದಿಯನ್ನು ಕೇಳಿ ಮುಹಮ್ಮದಶಹನು ಒಂದು ಲಕ್ಷ ಹಿಂದುಗಳನ್ನು ಕೊಲ್ಲಬೇಕೆಂದು ಪಣತೊಟ್ಟನು. ಇಬ್ಬರಿಗೂ ಆದವಾನಿಯ ಹತ್ತಿರ ಯುದ್ಧವಾಯಿತು. ಮುಂದೆ ಇಬ್ಬರಿಗೂ ಒಪ್ಪಂದವಾಯಿತು. ಕೆಲವು ದಿನಗಳ ತರುವಾಯ ಕ್ರಿ.ಶ. ೧೩೭೦ರಲ್ಲಿ ಬುಕ್ಕರಾಯನು ಮಡಿದನು.

## ಅಭ್ಯಸನಗಳು

೧. 'ಹೆಂಡದ ಹುಂಡಿಯು' ಬಗೆಗೆ ಗೊತ್ತಿದ್ದ ವೃತ್ತಾಂತವನ್ನು ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಇವನು...........ರಾಯನ ತಮ್ಮನು.

(ಆ) .......ರಾಜ್ಯದ........ಸ್ಥಾಪಕರಲ್ಲಿ ಇವನೊಬ್ಬನು.

(ಇ) ಇವನು ..........ವರುಷ ರಾಜ್ಯವಾಳಿದನು.

(ಈ) ಇವನ ದಂಡನಾಯಕನಾದ...........ನು ವೀರಶೈವನಿದ್ದನು. ಇನ್ನೊಬ್ಬ ದಂಡೇಶನಾದ...........ನು ಜೈನನಿದ್ದನು.

(ಉ) ಇವನಿಗೆ...........ಮಂದಿ ಮಕ್ಕಳಿದ್ದರು.

(ಊ) ವಿದ್ಯಾರಣ್ಯರ ತಮ್ಮಂದಿರಾದ ...........ರು ...........ಕ್ಕೆ ಭಾಷ್ಯವನ್ನು ಬರೆದರು.

---

# ೨೨. ಪ್ರೌಢ ದೇವರಾಯನು

ಇವನು ೧ನೆಯ ದೇವರಾಯನ ಮೊಮ್ಮಗನು. ೧ನೆಯ ದೇವರಾಯನ ಎರಡನೆಯ ಮಗನಾದ ವಿಜಯದೇವರಾಯನು ಇವನ ತಂದೆಯು. ಇವನು ವೀರನೂ ವಿದ್ಯಾಪ್ರಿಯನೂ ರಸಿಕನೂ ಆಗಿದ್ದನು. ಇವನಿಗೆ ವೀರಶೈವ ಮತದಲ್ಲಿ ನಂಬುಗೆ ಬಹಳವಿದ್ದಿತು. ಇವನ ಕಾಲದಲ್ಲಿ ವೀರಶೈವ ಮತಕ್ಕೆ ಹೆಚ್ಚು ರಾಜಾಶ್ರಯ ದೊರೆಯಿತು. 'ಲಕ್ಕಣ್ಣ ದಂಡೇಶ' ಎಂಬವನು ಇವನ ಮುಖ್ಯ ಪ್ರಧಾನನೂ 'ಜಕ್ಕಣಾರ್ಯ' ಎಂಬವನು ದಂಡನಾಯಕನೂ ಇದ್ದರು. ಇವರಿಬ್ಬರೂ ವೀರಶೈವರು. ಲಕ್ಕಣ್ಣನು "ಶಿವತತ್ವ ಚಿಂತಾಮಣಿ" ಎಂಬ ಗ್ರಂಥವನ್ನೂ, ಜಕ್ಕಣಾರ್ಯನು 'ನೂರೊಂದು ಸ್ಥಳ' ಎಂಬ ಗ್ರಂಥವನ್ನೂ ಬರೆದಿರುವರು. ಇವೆರಡೂ ವೀರಶೈವ ಮತದ ಗ್ರಂಥಗಳು. ಚಾಮರಸ ಕವಿಯು ಬರೆದ 'ಅಲ್ಲಮಪ್ರಭುದೇವರ ಚರಿತ್ರ'ಕ್ಕೆ ಮೆಚ್ಚಿ ಪ್ರೌಢ ದೇವರಾಯನು ಅವನಿಗೆ ಬಹು ಮರ್ಯಾದೆ ಮಾಡಿದನಂತೆ. ಇವನ ಆಳಿಕೆಯಲ್ಲಿ ಗದಗಿನ ಕುಮಾರವ್ಯಾಸನು "ಕನ್ನಡ ಭಾರತ" ವನ್ನು ಬರೆದನು.

ಇವನು ಜೀವದಿಂದಿರುವ ವರೆಗೆ, ಬಹಮನೀ ರಾಜರ ಸಂಗಡ ಯುದ್ಧ ಮಾಡಿ, ತನ್ನ ರಾಜ್ಯ ಕಾಯ್ದುಕೊಂಡು, ಅದನ್ನು ಬಲಿಸಿದನು. ಇವನ ಕಾಲಕ್ಕೆ ವಿಜಯನಗರ ರಾಜ್ಯವು ಉನ್ನತಿಯ ಶಿಖರಕ್ಕೇರಿತು. ಮುಸಲ್ಮಾನರು ಯುದ್ಧಕಲೆಯಲ್ಲಿ ಹಿಂದೂ ಜನರಿಗಿಂತ ಜಾಣರೂ ನಿಪುಣರೂ ಇರುವದನ್ನು ಕಂಡು, ತನ್ನ ದಂಡಿನವರಿಗೆ ಯುದ್ಧಕಲೆಯನ್ನು ಕಲಿಸಲು ಇವನು ತನಗೆ ಅನುಕೂಲರಾದ ಕೆಲ ಮುಸಲ್ಮಾನರನ್ನು ನವಕರಿಗೆ ಇಟ್ಟುಕೊಂಡನು. ಅವರಿಗಾಗಿ ಮಸೀದೆ ಕಟ್ಟಿಸಿದನು. ಇವನ ಕಾಲಕ್ಕೆ ದಂಡು ಒಳ್ಳೆ ಬಲಿಷ್ಠವಾದದ್ದಾಗಿತ್ತು. ತನ್ನನ್ನು ಕೆಣಕಿದ ಹೊರತು ಇವನು ಯಾರ ಮೇಲೂ ಏರಿ ಹೋಗಲಿಲ್ಲ. ಒಂದು ವೇಳೆ ಯಾವನಾದರೂ ಕಾಲು ಕೆದರಿ ಜಗಳ ತೆಗೆದರೆ, ಅವನ ಸೊಕ್ಕನ್ನು ಅಡಗಿಸಿ ಮತ್ತೊಮ್ಮೆ ತಲೆ ಎತ್ತದಂತೆ ಹಣ್ಣುಹಣ್ಣು ಮಾಡಿಬಿಡುತ್ತಿದ್ದನು. ಆದುದರಿಂದ ಆ ಸಮಯದ ಅರಸರೆಲ್ಲರೂ ಇವನಿಗೆ ಅಂಜಿ ಬೆಕ್ಕಿನಂತೆ ಇರುತ್ತಿದ್ದರು. ಇವನು ಒಳ್ಳೆ ವೈಭವದಿಂದ ರಾಜ್ಯವಾಳಿ ಕ್ರಿ. ಶ. ೧೪೪೬ ರಲ್ಲಿ ತೀರಿಕೊಂಡನು.

ಇವನ ಕಾಲದಲ್ಲಿ ಇಟಲಿಯ ದೇಶದ 'ನಿಕೋಲೋ ಕೊಂಟಿ' ಮತ್ತು ಇರಾಣದ 'ಅಬ್ದುಲ್ ರಝಾಕ್' ಎಂಬ ಪ್ರವಾಸಿಕರು ವಿಜಯನಗರಕ್ಕೆ ಬಂದಿದ್ದರು. ಇವರಿಬ್ಬರು ಆಗಿನ ವಿಜಯನಗರದ ವೈಭವವನ್ನು ಬಾಯಿ ತುಂಬ ಬಣ್ಣಿಸಿದ್ದಾರೆ. ಅವರು ಬರೆದಿರುವ ವೃತ್ತಾಂತವು ಕೆಳಗೆ ಕೊಟ್ಟಂತೆ ಇದೆ:—

ಈ ದೇಶವು ತೋಟಪಟ್ಟಿಗಳಿಂದಲೂ ಕಾಲುವೆಗಳಿಂದಲೂ ತುಂಬಿದ್ದು ಕಣ್ಣಿಗೆ ಬಹು ಚೆಂದವಾಗಿದೆ. ವಿಜಯನಗರಕ್ಕೆ ಏಳು ಸುತ್ತಿನ ಕೋಟೆಯಿದ್ದು ಏಳನೆಯ ಕೋಟೆಯಲ್ಲಿ ಅರಮನೆಯಿದೆ. ಈ ಪಟ್ಟಣದ ಸುತ್ತಳತೆ ಅರವತ್ತು ಮೈಲು. ಪೇಟೆಯು ಜನರಿಂದ ಗಿಜಗುಟ್ಟುವದು. ಅರಮನೆಯ ಎದುರಿಗೆ ಪಗಡೀ ಪಟ್ಟದಂತೆ ಪೇಟೆಯಿದ್ದು ಇಬ್ಬದಿಗೂ ಎರಡು ಅಂತಸ್ತಿನ ಮನೆಗಳು ಕಂಗೊಳಿಸುತ್ತವೆ. ಚಿನಿವಾಲರ ಪೇಟೆಯಲ್ಲಿ ದಿನಾಲು ಮುತ್ತು, ರತ್ನ, ವಜ್ರ, ವೈಡೂರ್ಯಗಳ ವ್ಯಾಪಾರ ನಡೆಯುತ್ತದೆ. ಪಟ್ಟಣದಲ್ಲಿ ಸಾವಿರಾರು ಆನೆಗಳುಂಟು. ಇಲ್ಲಿಯ ಅರಸನು ಬಹು ಶೂರ. ಇವನಲ್ಲಿ ೧೧ ಲಕ್ಷ ಸೈನ್ಯವಿದ್ದು, ರತ್ನಗಳಿಂದ ಕೆತ್ತಿದ ಬಂಗಾರದ ಸಿಂಹಾಸನವಿರುವದು. ಹಣ್ಣು

ಹಂಪಲ–ಕಾಯಿಪಲ್ಲೆಗಳ ಪೇಟೆಯನ್ನು ನೋಡಿದರೆ ಕಣ್ಣು ತಿರುಗುತ್ತವೆ. ಇಲ್ಲಿ ಒಂದು ಲಕ್ಷ ಮನೆಗಳಿವೆ. ಬೆಳ್ಳಿ–ಬಂಗಾರದಿಂದ ತುಂಬಿದ ಅನೇಕ ನೆಲಮನೆಗಳು ಅರಮನೆಯಲ್ಲಿವೆ. ”

## ಅಭ್ಯಸನಗಳು

೧. ಪ್ರೌಢದೇವರಾಯನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿದ ಪ್ರವಾಸಿಕರಾರು? ಅವರು ಬರೆದಿಟ್ಟ ವೃತ್ತಾಂತವನ್ನು ಬರೆಯಿರಿ.

೨. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದೊಂದನ್ನು ಆರಿಸಿಕೊಂಡು ವಾಕ್ಯವನ್ನು ಪೂರ್ಣ ಮಾಡಿ ಬರೆಯಿರಿ:—

(ಅ) ಇವನ ತಂದೆಯು............ನು (೧ನೇ ದೇವರಾಯ, ವಿಜಯದೇವರಾಯ)

(ಆ) ಇವನಿಗೆ....................ಮತದಲ್ಲಿ ನಂಬಿಗೆ ಬಹಳವಿದ್ದಿತು. (ವೈಷ್ಣವ, ಜೈನ, ವೀರಶೈವ)

(ಇ) ...............ಎಂಬವನು ಇವನ ಮುಖ್ಯ ಪ್ರಧಾನನಿದ್ದನು. (ಜಕ್ಕಣಾರ್ಯ, ಲಕ್ಕಣ್ಣದಂಡೇಶ, ಚಾಮರಸ)

(ಈ) ಜಕ್ಕಣಾರ್ಯನು...................ಎಂಬ ಗ್ರಂಥವನ್ನು ಬರೆದನು. (ನೂರೊಂದು ಸ್ಥಲ, ಅಲ್ಲಮಪ್ರಭುದೇವರ ಚರಿತ್ರ, ಶಿವತತ್ವ ಚಿಂತಾಮಣಿ)

(ಉ) ತನ್ನ ದಂಡಿನವರಿಗೆ ಯುದ್ಧ ಕಲೆಯ ಶಿಕ್ಷಣವನ್ನು ಕೊಡಿಸಲು ಕೆಲ...............ರನ್ನು ನವಕರಿಗೆ ಇಟ್ಟುಕೊಂಡನು. (ಇಂಗ್ಲಿಷರು, ಮುಸಲ್ಮಾನರು, ಫ್ರೆಂಚರು)

(ಊ) ಇವನು ಕ್ರಿ. ಶ............ರಲ್ಲಿ ತೀರಿಕೊಂಡನು. (೧೪೪೬, ೧೩೪೬, ೧೫೪೬)



# ೨೩. ಲಕ್ಕಣ್ಣ ದಂಡೇಶ

ವಿಷ್ಣುವರ್ಧನ ಗೋತ್ರದ ಹೆಗ್ಗಡೆದೇವನೆಂಬವನೊಬ್ಬ ವೀರಶೈವ ಗೃಹಸ್ಥನಿದ್ದನು. ಅವನ ಹೆಂಡತಿಯ ಹೆಸರು ಒಮ್ಮಾಯಮ್ಮ. ಇವರಿಗೆ ಲಕ್ಕಣ್ಣ-ಮಾದಣ್ಣರೆಂಬ ಇಬ್ಬರು ಗಂಡುಮಕ್ಕಳಿದ್ದರು. ಇವರಿಬ್ಬರೂ ಶೂರರೂ ಯುದ್ಧಕಲೆಯಲ್ಲಿ ಒಳ್ಳೆ ಚತುರರೂ ಇದ್ದರು. ಲಕ್ಕಣ್ಣನು ಶೂರನಿದ್ದಂತೆ ಪಂಡಿತನೂ ಇದ್ದನು. ಇವರ ಶೌರ್ಯ-ಸಾಹಸಗಳಿಗೆ ಮೆಚ್ಚಿ ವಿಜಯನಗರದ ಪ್ರೌಢದೇವರಾಯನು ಇವರಿರ್ವರನ್ನು ದಳಪತಿಗಳನ್ನಾಗಿ ನಿಯಮಿಸಿದನು. ಲಕ್ಕಣ್ಣನು ತನ್ನಲ್ಲಿದ್ದ ಯೋಗ್ಯತೆಯಿಂದ ಏರುತ್ತ ಏರುತ್ತ ಕೊನೆಗೆ ಕ್ರಿ. ಶ. ೧೪೨೮ ರಲ್ಲಿ ಪ್ರೌಢದೇವರಾಯನ ಮುಖ್ಯ ಮಂತ್ರಿಯೂ ದಂಡೇಶನೂ ಆದನು.

ಕೆಲ ಕಾಲ ಈತನು ಪ್ರೌಢದೇವರಾಯನಿಂದ ತೇಕಲ ಪ್ರಾಂತ (ಈಗಿನ ಕೋಲಾರ ಜಿಲ್ಹೆ) ದ ಒಡೆಯನಾಗಿಯೂ ಮತ್ತೆ ಕೆಲ ಕಾಲ ತುಂದಿರ ಪ್ರಾಂತ (ಈಗಿನ ದಕ್ಷಿಣ ಅರ್ಕಾಟ ಜಿಲ್ಹೆ) ದ ಒಡೆಯನಾಗಿಯೂ ನಿಯಮಿಸಲ್ಪಟ್ಟಿದ್ದನು. ಆಗ ದಾನಧರ್ಮಗಳನ್ನೆಷ್ಟೋ ಮಾಡಿ ಗುಡಿಗುಂಡಾರಗಳನ್ನು ಕಟ್ಟಿಸಿದನು. ಕೋಲಾರ ಜಿಲ್ಹೆಯೊಳಗಿನ ವಿರೂಪಾಕ್ಷಪುರವೆಂಬಲ್ಲಿ ಈತನು ಕಟ್ಟಿಸಿದ ಪ್ರಸನ್ನ ವಿರೂಪಾಕ್ಷನ ಸುಂದರವಾದ ಮತ್ತು ಭವ್ಯ ದೇವಾಲಯವು ನೋಡತಕ್ಕಂತಹದಿದೆ. ಕ್ರಿ. ಶ. ೧೪೪೩ ರಲ್ಲಿ ಲಕ್ಕಣ್ಣ ದಂಡೇಶನು ಸಿಂಹಳ ದ್ವೀಪಕ್ಕೆ ಹೋಗಿ ದಾಳೀ ಮಾಡಿ ಬಂದನು. ಆದುದರಿಂದ ಈತನಿಗೆ "ದಕ್ಷಿಣ ಸಮುದ್ರಾಧೀಶ್ವರ" ಎಂಬ ಬಿರುದು ಸಿಕ್ಕಿತು. ಆಗ ತನ್ನ ಹೆಸರಿನಿಂದ ನಾಣ್ಯಗಳನ್ನು ಹೊರಡಿಸಿದನು. "ಶಿವತತ್ವ ಚಿಂತಾಮಣಿ" ಎಂಬದೊಂದು ಅಮೌಲ್ಯವಾದ ಗ್ರಂಥವನ್ನು ಬರೆದಿದ್ದಾನೆ. ಅದರಿಂದ ಈತನು ಘನ ವಿದ್ವಾಂಸನಿದ್ದನೆಂಬುದು ಗೊತ್ತಾಗುತ್ತದೆ.

ಇದೇ ಕಾಲಕ್ಕೆ ಪ್ರೌಢದೇವರಾಯನ ಮತ್ತೊಬ್ಬ ದಂಡನಾಯಕನಿದ್ದನು. ಅವನ ಹೆಸರು ಜಕ್ಕಣಾರ್ಯ. ಲಕ್ಕಣ್ಣನಂತೆ ಇವನಾದರೂ ಶೂರನಿದ್ದ ಹಾಗೆ ದೊಡ್ಡ ಪಂಡಿತನೂ ಇದ್ದನು. ಇವನು "ನೂರೊಂದು ಸ್ಥಲ" ಇಲ್ಲವೆ

"ಏಕೋತ್ತರಶತಸ್ಥಲ" ಎಂಬದೊಂದು ವೀರಶೈವ ಧರ್ಮಗ್ರಂಥವನ್ನು ಬರೆದಿದ್ದಾನೆ. ಆದಾದರೂ ಶಿವತತ್ವ ಚಿಂತಾಮಣಿಯಂತೆ ಶ್ರೇಷ್ಠವಾದ ಗ್ರಂಥವು. ಲಕ್ಕಣ್ಣ ಜಕ್ಕಣರಿಬ್ಬರೂ ಸಾಹಿತ್ಯಸೇವೆಯನ್ನು ಕೂಡಿಕೊಂಡೇ ಮಾಡುತ್ತಿದ್ದರೆಂದು ತೋರುತ್ತಿದೆ. ಆ ಕಾಲದ ಸಾಹಿತ್ಯದಲ್ಲಿ ಇವರ ಹೆಸರುಗಳು ಜೋಡಾಗಿಯೇ ಉಲ್ಲೇಖವಾದುದು ಕಂಡುಬರುತ್ತಿದೆ.

## ಅಭ್ಯಸನಗಳು

ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಲಕ್ಕಣ್ಣನ ತಂದೆಯ ಹೆಸರು..............., ಮತ್ತು ತಾಯಿಯ ಹೆಸರು...........

(ಆ) ಈತನಿಗೆ...........ನೆಂಬೊಬ್ಬ ಸಹೋದರನಿದ್ದನು.

(ಇ) ಇವರ...............ಗಳಿಗೆ ಮೆಚ್ಚಿ ವಿಜಯನಗರದ .......... ರಾಯನು ಇವರಿರ್ವರನ್ನು............ಗಳನ್ನಾಗಿ ನಿಯಮಿಸಿದನು.

(ಈ) ಕ್ರಿ. ಶ...........ರಲ್ಲಿ ಈತನು...............ರಾಯನ ಮುಖ್ಯ ............ಯೂ............ನೂ ಆದನು.

(ಉ) ...............ಜಿಲ್ಹೆಯೊಳಗಿನ...............ವೆಂಬಲ್ಲಿ ಈತನು ಕಟ್ಟಿಸಿದ.... .. ....ನ ದೇವಾಲಯವು ನೋಡತಕ್ಕಂತಹದು ಇದೆ.

(ಊ) ಕ್ರಿ. ಶ...............ರಲ್ಲಿ ಈತನು...........ದ್ವೀಪಕ್ಕೆ ಹೋಗಿ ...............ಮಾಡಿ ಬಂದನು. ಆದುದರಿಂದ ಈತನಿಗೆ...............ಎಂಬ ಬಿರುದು ಸಿಕ್ಕಿತು.

(ಎ) ...............ಎಂಬದೊಂದು ಅಮೌಲ್ಯವಾದ ಗ್ರಂಥವನ್ನು ಬರೆದಿದ್ದಾನೆ.

(ಏ) ರಾಯನ ಮತ್ತೊಬ್ಬ ದಂಡನಾಯಕನಾದ........ನು........... ಇಲ್ಲವೆ...........ಎಂಬದೊಂದು...........ಧರ್ಮಗ್ರಂಥವನ್ನು ಬರೆದಿದ್ದಾನೆ.

# ೨೪. ಕುಮಾರವ್ಯಾಸನು

ಈತನು ಹುಬ್ಬಳ್ಳಿ ತಾಲೂಕಿನಲ್ಲಿರುವ ಕೋಳಿವಾಡ ಗ್ರಾಮದ ಶಾನು ಭೋಗನು. ಈತನು ಗದಗಿನ ವೀರನಾರಾಯಣನ ಭಕ್ತನು. ಇವನ ರೂಢಿಯ ಹೆಸರು ನಾರಾಯಣಪ್ಪ ಇಲ್ಲವೆ ನಾರಣಪ್ಪನೆಂದು ಇದ್ದಿತು. ಈತನು ವಿಜಯನಗರದ ಪ್ರೌಢದೇವರಾಯನ ಕಾಲಕ್ಕೆ ಇದ್ದನು. ಇವನು



ಶ್ರೀ ಕುಮಾರವ್ಯಾಸ

ವೀರನಾರಾಯಣನ ಭಕ್ತನಾದುದರಿಂದ್ಕ ತನ್ನ ಊರಾದ , ಕೋಳಿವಾಡವನ್ನು ಬಿಟ್ಟು ಗದಗಿನಲ್ಲಿಯೇ ಇರಹತ್ತಿದನು. ದಿನಾಲು ದೇವರ ಸೇವೆ ಮಾಡುವ ದಾದ ಮೇಲೆ ಶ್ರೀ ವ್ಯಾಸಮಹರ್ಷಿಯು ಸಂಸ್ಕೃತದಲ್ಲಿ ಬರೆದ ಮಹಾ

ಭಾರತವನ್ನು ಭಾಷಾಂತರಿಸಿ ಕನ್ನಡದಲ್ಲಿ ಬರೆಯಲಾರಂಭಿಸಿದನು. ಆದ ರಿಂದ ಈತನು ತನಗೆ 'ಕುಮಾರವ್ಯಾಸ'-ಎಂಬ ಹೆಸರನ್ನಿಟ್ಟುಕೊಂಡಂತೆ ತೋರುತ್ತದೆ. ಈತನು ಈ ಕಾವ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಬಲು ಸೊಗ ಸಾಗಿ ಬರೆದಿದ್ದಾನೆ. ಭಾಷಾ ಶೈಲಿಯು ಬಹು ಸರಳವೂ ಸುಗಮವೂ ಆಗಿದೆ. ಆದುದರಿಂದ ಎಲ್ಲರೂ ಅದನ್ನು ಬಲು ಅಕ್ಕರತೆಯಿಂದ ಓದುತ್ತಾರೆ. ಮೊದ ಲಿನ ಹತ್ತು ಪರ್ವಗಳನ್ನು ಮುಗಿಸುತ್ತಲೇ ಈತನು ವೈಕುಂಠವಾಸಿಯಾದನು. ಇದು ನಿಜವಾಗಿ ದುಃಖದ ಸಂಗತಿಯು! ಇನ್ನಷ್ಟು ಹೆಚ್ಚುಕಾಲ ಬಾಳಿದ್ದರೆ, ಎಲ್ಲ ಪರ್ವಗಳನ್ನು ಮುಗಿಸಿಬಿಡುತ್ತಿದ್ದನು.

ವೀರಶೈವ ಕವಿಯೆಂದು ಪ್ರಖ್ಯಾತನಾದ ಚಾಮರಸನು ಇವನ ಬೀಗ ನಾಗಿದ್ದನೆಂದು ಹೇಳುತ್ತಾರೆ. ಅವನಾದರೂ ಕುಮಾರವ್ಯಾಸನಂತೆ ಶ್ರೇಷ್ಠ ಕವಿಯು. ಇವರಿಬ್ಬರಲ್ಲಿ ನಾ ಹೆಚ್ಚು ತಾ ಹೆಚ್ಚೆಂಬ ಏರಾಟ ಮೇಲಾಟಗಳು ನಡೆದಿದ್ದವೆಂಬಂತೆ ತೋರುತ್ತದೆ. ಕುಮಾರವ್ಯಾಸನು ಕನ್ನಡ ಭಾರತವನ್ನು ಬರೆದಂತೆ, ಚಾಮರಸನು 'ಪ್ರಭುಲಿಂಗಲೀಲೆ' ಎಂಬ ಉತ್ತಮವಾದ ಕಾವ್ಯ ವನ್ನು ಬರೆದಿದ್ದಾನೆ. ಇದರ ಭಾಷಾಂತರವು ತಮಿಳು, ತೆಲಗು, ಮರಾಠಿ ಭಾಷೆ ಗಳಲ್ಲಿ ಸಹ ಆಗಿದೆ. ಇದರ ಮೇಲಿಂದ ಈ ಕಾವ್ಯವು ಎಂತಹ ಶ್ರೇಷ್ಠ ಗ್ರಂಥವಿರಬೇಕೆಂಬುದು ತಾನೆ ಹೊಳೆಯುವದು. ಚಾಮರಸ ಮತ್ತು ಕುಮಾರವ್ಯಾಸ, ಇವರಲ್ಲಿ ಯಾರು ಹೆಚ್ಚಿನವರೆಂಬದನ್ನು ಹೇಳುವದು ಬಲು ಕಷ್ಟ. ಇಬ್ಬರೂ ತಮ್ಮ ತಾಯ್ನಾಡಿನ ಚೆಲುವಿಕೆಯನ್ನು ಹೆಚ್ಚಿಸಿರು ವರು.

## ಅಭ್ಯಸನಗಳು

ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ಈತನು................ತಾಲೂಕಿನಲ್ಲಿರುವ....... ................ ಗ್ರಾಮದ............ನು.

(ಆ) ಈತನು ಗದಗಿನ........... ನ ಭಕ್ತನು.

(ಇ) ಈತನ ಹೆಸರು............

(ಈ) ................ಮಹರ್ಷಿಯು ಮಹಾಭಾರತವನ್ನು................ .... .... .... ಭಾಷೆಯಲ್ಲಿ ಬರೆದವನಾದುದರಿಂದ, ಈತನು .... .... .... .... ನೆಂಬ ಹೆಸರನ್ನಿಟ್ಟುಕೊಂಡಂತೆ ತೋರುತ್ತದೆ.

(ಉ) ಮೊದಲಿನ .... .... ಪರ್ವಗಳನ್ನು ಮುಗಿಸುತ್ತಲೇ ಈತನು .... .... ವಾಸಿಯಾದನು.

(ಊ) ಈತನ ಬೀಗನಾದ .... .... .... .... ನು .... .... .... .... ರಾಯನ ಓಲಗದಲ್ಲಿ ಶ್ರೇಷ್ಠ ಕವಿಯಿದ್ದನು.

(ಎ) ಇವರಿಬ್ಬರಲ್ಲಿ ನಾ ಹೆಚ್ಚು ತಾ ಹೆಚ್ಚೆಂಬ .... .... .. ಗಳು ನಡೆದಿದ್ದವೆಂಬಂತೆ ತೋರುತ್ತದೆ.

(ಏ) ಚಾಮರಸನು .... .... .... ಎಂಬ ಉತ್ತಮವಾದ ಕಾವ್ಯವನ್ನು ಬರೆದಿದ್ದಾನೆ.

# ೨೫. ಕೃಷ್ಣದೇವರಾಯನು

ಇವನು ತುಳು ವಂಶದವನು. ಇವನ ತಂದೆಯು ಹೆಸರು ನರಸರಾಜ, ತಾಯಿಯು ಹೆಸರು ನಾಗಾಂಬಿಕೆ. ನರಸರಾಜನಿಗೆ ನಾಲ್ಕು ಮಂದಿ ಮಕ್ಕಳಿದ್ದರು. ಅವರಲ್ಲಿ ಎರಡನೆಯವನೇ ಕೃಷ್ಣದೇವರಾಯನು. ಇವನು ಚಿಕ್ಕವನಿದ್ದಾಗ ಇವನ ಮಲತಾಯಿಯಾದ ತಿಪ್ಪಾಂಬಿಕೆಯೆಂಬವಳು ಇವನನ್ನು ಕೊಲ್ಲಿಸಬೇಕೆಂದು ಕುತಂತ್ರವನ್ನು ಹೂಡಿದ್ದಳು. ಇದು ತಿಮ್ಮರಸನೆಂಬ ಮಂತ್ರಿಯ ಮನಸ್ಸಿಗೆ ಬರಲಿಲ್ಲ. ಅವನು ಕೃಷ್ಣರಾಯನನ್ನು ಅಡಗಿಸಿಟ್ಟು ಸಾಕಿ ಸಲುಹಿದನು. ಅವನ ದಯೆಯಿಂದ ಕೃಷ್ಣರಾಯನು ಜೀವಂತ ಉಳಿದು ಪಟ್ಟಕ್ಕೆ ಬಂದದ್ದರಿಂದ, ಅವನ ಉಪಕಾರವನ್ನು ಸ್ಮರಿಸಿ ಅವನನ್ನು ತನ್ನ ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಂಡನು. ತನ್ನ ಸೈನ್ಯದ ಸಿದ್ಧತೆಯನ್ನು ಚೆನ್ನಾಗಿ ಮಾಡಿಕೊಂಡು ದಿಗ್ವಿಜಯಕ್ಕಾಗಿ ಹೊರಟನು. ಕೋಯಿಮತ್ತೂರು, ಶ್ರೀರಂಗಪಟ್ಟಣ, ಶಿವಸಮುದ್ರಗಳನ್ನು ಗೆದ್ದು, ಹಾಗೇ ಮುಂದಕ್ಕೆ ನಡೆದು, ಚೇರ, ಚೋಳ, ಪಾಂಡ್ಯ, ಮಲಯಾಳ ರಾಜರನ್ನು ಸೋಲಿಸಿ, ಪೂರ್ವಕ್ಕೆ ಸಾಗಿದನು. ಓಡಿಸಾ, ತೆಲುಗು ರಾಜ್ಯಗಳನ್ನು ವಶಪಡಿಸಿಕೊಂಡು, ಓಡಿಸಾ ದೇಶದ ಅರಸನ ಮಗಳನ್ನು ಮದುವೆಯಾದನು. ಆಗ ವಿಜಯನಗರ ಮತ್ತು ವಿಜಾಪುರದವರಲ್ಲಿ ಬಹುದಿನಗಳಿಂದ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಸೀಮೆಯ ದೆಶೆಯಿಂದ ಜಗಳ ಇದ್ದೇ ಇತ್ತು. ಅದನ್ನು ಒಮ್ಮೆ ನಿರ್ಣಯ ಮಾಡಲಿಕ್ಕೇಬೇಕೆಂದು ಕೃಷ್ಣರಾಯನಿಗೆ ಅನಿಸಿದ್ದರಿಂದ, ಆದಿಲ ಶಾಹಿಯ ರಾಜ್ಯದ ಮೇಲೆ ದಂಡೆತ್ತಿ ಹೋದನು. ಆ ಕಾಳಗದಲ್ಲಿ ಇಸ್ಮಾಯಿಲ ಆದಿಲಶಹನು ಸೋತು ಆನೆಯ ಮೇಲೆ ಕುಳಿತು ಓಡಿಹೋದನು. ಇದರಲ್ಲಿ ಕೃಷ್ಣರಾಯನು ಮೀರಿದ ಪರಾಕ್ರಮವನ್ನು ತೋರಿಸಿದನು. ಕೃಷ್ಣಾನದಿಯಿಂದ ಕೆಳಗೆ ಇಡಿಯ ದಕ್ಷಿಣ ಭಾರತವೇ ಇವನ ಕೈಸೇರಿತು. ಇವನಿಗೆ " ಕನ್ನಡ ರಾಜ್ಯ ರಮಾರಮಣ " ಎಂಬ ಬಿರುದು ಇತ್ತು.

ಇವನ ಕಾಲದಲ್ಲಿ ಮಧ್ವಮತದ ಶ್ರೀ ವ್ಯಾಸರಾಯ ಸ್ವಾಮಿಗಳೆಂಬವರು ದೊಡ್ಡ ತಪಸ್ವಿಗಳಾಗಿ ಹೋದರು. ಅವರನ್ನು ಕೃಷ್ಣರಾಯನು ಗುರು

ಗಳನ್ನಾಗಿ ಮಾಡಿಕೊಂಡಿದ್ದನು. ಇವನ ಕಾಲಕ್ಕೆ ವೈಷ್ಣವರಿಗೆ ಉತ್ತೇಜನ ಬಹಳ ಸಿಕ್ಕಿತು. ಇವನು ತಿಮ್ಮಣ್ಣನೆಂಬ ಕನ್ನಡ ಕವಿಗೆ ಆಶ್ರಯ ಕೊಟ್ಟು ಕುಮಾರವ್ಯಾಸನು ಬರೆದ ಮಹಾಭಾರತವನ್ನು ಮುಗಿಸಿದನು. ಕನ್ನಡದಂತೆ, ಸಂಸ್ಕೃತ-ತೆಲುಗು ಕವಿಗಳಿಗೂ ಆಶ್ರಯ ಕೊಟ್ಟಿದ್ದನು. ಪ್ರಖ್ಯಾತ ಪಂಡಿತನಾದ ಅಪ್ಪಯ್ಯ ದೀಕ್ಷಿತನು ಇವನ ಆಶ್ರಯದಲ್ಲಿಯೇ ಇದ್ದನು. ತೆನ್ನಾಲ ರಾಮಕೃಷ್ಣನೆಂಬವನು ಇವನ ಓಲಗದಲ್ಲಿ ವಿನೋದಗಾರನಾಗಿದ್ದನು. ಅವನು ಮಾಡಿದ ವಿನೋದ-ಹಾಸ್ಯಗಳು ನಮ್ಮೆಲ್ಲರಿಗೆ ಮನೆಮಾತುಗಳಾಗಿವೆ. ಕನ್ನಡ ದಾಸವರ್ಯರಾದ ಪುರಂದರ ದಾಸರು ಇವನ ಕಾಲದಲ್ಲಿಯೇ ವಿಜಯನಗರದಲ್ಲಿದ್ದರು.



ಹಂಪೆಯ ಶ್ರೀ ವಿಜಯವಿಠ್ಠಲನ ಗುಡಿ

ಇವನು ವಿಜಯನಗರದಲ್ಲಿ ಶ್ರೀ ವಿಜಯ ವಿಠ್ಠಲ ದೇವರ ಗುಡಿ, ಹಜಾರ ರಾಮನ ಗುಡಿಗಳನ್ನೂ, ವಿರೂಪಾಕ್ಷದೇವರ ಗುಡಿಯ ಪೂರ್ವ ಮತ್ತು ಉತ್ತರ ಗೋಪುರಗಳನ್ನೂ, ಬಸವಣ್ಣನ ಕಾಲುವೆಯನ್ನೂ ಕಟ್ಟಿಸಿದನು.

ಇವನಿಗೆ ಗಂಡು ಮಕ್ಕಳಿರಲಿಲ್ಲ. ಇಬ್ಬರು ಹೆಣ್ಣುಮಕ್ಕಳಿದ್ದರು. ಇವನು ೨೦ ವರುಷ ಉತ್ತಮ ರೀತಿಯಿಂದ ರಾಜ್ಯವಾಳಿ ಕ್ರಿ. ಶ. ೧೫೨೯ ರಲ್ಲಿ ತೀರಿಕೊಂಡನು. ಇವನು ವಿಜಯನಗರದ ಸಾಮ್ರಾಜ್ಯಕ್ಕೆ ಕಳಸವಿಟ್ಟನು.

## ಅಭ್ಯಸನಗಳು

೧. ಇವನು ತನ್ನ ದಿಗ್ವಿಜಯದಲ್ಲಿ ವಶಪಡಿಸಿಕೊಂಡ; ರಾಜ್ಯಗಳ ಹೆಸರುಗಳನ್ನು ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ —

(ಅ) ಇವನ ತಂದೆಯ ಹೆಸರು .... ...., ತಾಯಿಯ ಹೆಸರು........

(ಆ ಇವನು ಚಿಕ್ಕವನಿದ್ದಾಗ, ಇವನ ಮಲತಾಯಿಯಾದ .... .... ಯೆಂಬವಳು ಇವನನ್ನು ಕೊಲ್ಲಿಸಬೇಕೆಂದು .... .... ವನ್ನು ಹೂಡಿದ್ದಳು.

(ಇ) ಈ ಒಳಸಂಚು .... .... .... ನೆಂಬ ಮಂತ್ರಿಯ ಮನಸ್ಸಿಗೆ ಬರಲಿಲ್ಲ.

(ಈ) ಇವನಿಗೆ .... .... ಎಂಬ ಬಿರುದು ಇತ್ತು.

(ಉ) ಇವನು ಶ್ರೀ.... .... .... ಸ್ವಾಮಿಗಳನ್ನು ತನ್ನ ಗಳನ್ನಾಗಿ ಮಾಡಿಕೊಂಡನು.

(ಊ) .... .... ನೆಂಬವನು ಇವನ ಓಲಗದ ವಿನೋದಗಾರನಿದ್ದನು.

(ಎ) .... .... .... ದಾಸರು ಇವನ ಕಾಲದಲ್ಲಿಯೇ ವಿಜಯನಗರದಲ್ಲಿದ್ದರು.

(ಏ) ಇವನು .... .... ನ ಕಾಲುವೆಯನ್ನು ಕಟ್ಟಿಸಿದನು.

(ಐ) ಇವನು .... .... ವರುಷ ರಾಜ್ಯವಾಳಿದನು.

# ೨೬. ಪುರಂದರದಾಸರು

ಸಹ್ಯಾದ್ರಿಯ ಅಡಿಯಲ್ಲಿ ಪುಣೆ ಜಿಲ್ಲೆಯಲ್ಲಿ ಪುರಂದರ ಎಂಬದೊಂದು ಹಳ್ಳಿ. ಅಲ್ಲಿ ಕೃಷ್ಣಪ್ಪನಾಯಕನೆಂಬೊಬ್ಬ ಚಿನಿವಾಲನಿದ್ದನು. ಇವನು ಬಲು ಜೀನನಿದ್ದನು. ಯಾರಿಗೂ ಒಂದು ಕಾಸನ್ನು ಸಹ ದಾನಮಾಡಿದವನಲ್ಲ. ಯಾರಾದರೂ ಭಿಕ್ಷೆ ಬೇಡಲು ಬಂದರೆ "ಈಗ ಬಾ, ಆಗ ಬಾ" ಎಂದು ಅವರನ್ನು ಎಡತಾಕಿಸಿ, ಅವರು ತಾವಾಗಿಯೇ ಬೇಸತ್ತು ಹೋಗುವ ಹಾಗೆ ಮಾಡಿಬಿಡುತ್ತಿದ್ದನು. ಒಮ್ಮೆ ಒಬ್ಬ ಬ್ರಾಹ್ಮಣನು ಮಗನ ಮುಂಜಿವೆಗೆ ಏನಾದರೂ ಸಹಾಯ ಮಾಡಿರೆಂದು ಬೇಡಿಕೊಂಡನು. ವಾಡಿಕೆಯಂತೆ ಅವನನ್ನು ಐದಾರು ಸಲ ಓಡಾಡಿಸಿ ಒಂದು ಖೊಟ್ಟಿ ನಾಣ್ಯವನ್ನು ಕೊಟ್ಟನು. ಬ್ರಾಹ್ಮಣನು ಅದನ್ನು ಬಿಸುಟಿ ಹಿತ್ತಲ ಬಾಗಿಲದಿಂದ ಅವನ ಹೆಂಡತಿಯ ಹತ್ತಿರ ಹೋದನು. ಅವಳು ದೊಡ್ಡ ಮನಸ್ಸಿನವಳಿದ್ದಳು. ಅವಳ ಮನಸ್ಸು ಕರಗುವ ಹಾಗೆ ಸಹಾಯ ಮಾಡಲು ಬಹು ದೈನ್ಯದಿಂದ ಬೇಡಿಕೊಂಡನು. ಕೂಡಲೆ ಅವಳು ತನ್ನ ಮೂಗಿನೊಳಗಿನ ನತ್ತನ್ನೇ ಉಚ್ಚಿ ಕೊಟ್ಟಳು. ಅದನ್ನು ತಕ್ಕೊಂಡು ಆ ಬ್ರಾಹ್ಮಣನು ನೆಟ್ಟಗೆ ಕೃಷ್ಣಪ್ಪನ ಅಂಗಡಿಗೆ ಮಾರಲು ಹೋದನು. ಕೃಷ್ಣಪ್ಪನು ನತ್ತನ್ನು ನೋಡಿದ ಕೂಡಲೆ ತನ್ನದೆಂದು ಸಂಶಯ ಬಂದುಬಿಟ್ಟಿತು. ಅದನ್ನು ತನ್ನ ಭದ್ರವಾದ ಪೆಟ್ಟಿಗೆಯಲ್ಲಿ ಇಟ್ಟು ಬೀಗಹಾಕಿದನು. ಬ್ರಾಹ್ಮಣನಿಗೆ ಅಲ್ಲಿಯೇ ತಾನು ಬರುವ ವರೆಗೆ ಕುಳಿತುಕೊಳ್ಳಲು ಹೇಳಿ, ಮನೆಗೆ ಹೋಗಿ ತನ್ನ ಹೆಂಡತಿಗೆ ನತ್ತನ್ನು ಕೊಡಲು ಕೇಳಿದನು. ಅವಳು ಗಾಬರಿಯಾದಳು. ಮುಂದೆ ಆಗಬಹುದಾದ ಪರಿಣಾಮವು ಅವಳಿಗೆ ಹೊಳೆಯಿತು. ವಿಷ ಕುಡಿದು ಪ್ರಾಣ ಬಿಡಲು ಸಿದ್ಧಳಾದಳು! ವಿಷದ ಬಟ್ಟಲವನ್ನು ಬಾಯಿಗೆ ಹಚ್ಚುವಷ್ಟರಲ್ಲಿ, ಆ ನತ್ತು ಬಂದು ಅದರಲ್ಲಿ ಬಿದ್ದಿತಂತೆ! ಅದನ್ನು ನಗುತ್ತ ಒಯ್ದು ಗಂಡನ ಕೈಯಲ್ಲಿ ಕೊಟ್ಟುಬಿಟ್ಟಳು. ಅದನ್ನು ಕಿಸೆಯಲ್ಲಿಟ್ಟುಕೊಂಡು ಅಂಗಡಿಗೆ ಹೋಗಿ ಪೆಟ್ಟಿಗೆಯನ್ನು ತೆರೆದು ತಾನಿಟ್ಟು ಬಂದಿದ್ದ ನತ್ತನ್ನು ನೋಡಿದನು. ಅಲ್ಲಿ ಅದು ಇರಲಿಲ್ಲ! ಆ ಬ್ರಾಹ್ಮಣನೂ ಹೋಗಿಬಿಟ್ಟಿದ್ದನು!! ತನ್ನ ಜೀನತನವನ್ನು ಬಿಡಿಸಲು ದೇವರೇ ಈ ಆಟ ಹೂಡಿದನೆಂದು ಅವನು ಮನಗಂಡನು. ಅಂದಿನಿಂದ ಅವನಿಗೆ ವೈರಾಗ್ಯವು

ಬಂದು ಬಿಟ್ಟಿತು. ಅವನಲ್ಲಿ ಜ್ಞಾನೋದಯವಾಯಿತು. ನಿಂತ ಕಾಲ ಮೇಲೆ ತನ್ನ ಆಸ್ತಿಯನ್ನೆಲ್ಲ ದಾನಮಾಡಿಬಿಟ್ಟನು. ಕಾಲಲ್ಲಿ ಗೆಜ್ಜೆಯನ್ನು ಕಟ್ಟಿಕೊಂಡು ಕೈಯಲ್ಲಿ ತಾಳ–ತಂಬೂರಿಗಳನ್ನು ಹಿಡಿದುಕೊಂಡು ಭಕ್ತಿ–ಜ್ಞಾನಗಳ ಬಗೆಗೆ ಹಾಡುಗಳನ್ನು ಹಾಡುತ್ತ ದೇಶಸಂಚಾರಕ್ಕಾಗಿ ಹೊರ ಬಿದ್ದನು. ಆ ಕಾಲಕ್ಕೆ ಹೆಸರಾದ ಶ್ರೀ ವ್ಯಾಸರಾಯ ಸ್ವಾಮಿಗಳ ಬಳಿಗೆ ಹೋಗಿ ಅವರ ಅನುಗ್ರಹಕ್ಕೆ ಪಾತ್ರನಾಗಿ, ಅವರ ಆಶೀರ್ವಾದವನ್ನು ಪಡೆದನು. ಈತನು ಪುರಂದರ ಗ್ರಾಮದವನಾದುದರಿಂದ ಎಲ್ಲರೂ ಈತನನ್ನು "ಪುರಂದರದಾಸ" ಎಂದು ಕರೆಯಹತ್ತಿದರು.



ಪುರಂದರದಾಸರು

ಈಗಿನ ಸೊಲ್ಲಾಪುರ ಜಿಲ್ಲೆಯಲ್ಲಿರುವ ಪಂಢರಪುರಕ್ಕೆ ಹೋಗಿ, ಅಲ್ಲಿ ವಿಠ್ಠಲನ ಸೇವೆಯಲ್ಲಿ ಕೆಲ ಕಾಲ ಕಳೆದನು. ವಿಠ್ಠಲನ ಗುಡಿಯಲ್ಲಿ ಒಂದು ಕಂಬಕ್ಕೆ "ಪುರಂದರದಾಸನ ಕಂಬ" ಎಂದು ಕರೆಯುತ್ತಾರೆ. ಅಲ್ಲಿ ಮುಸ

ಲ್ಮಾನರ ಹಾವಳಿಯು ಹೆಚ್ಚಾಗಲು ಆ ಊರನ್ನು ಬಿಟ್ಟು ವಿಜಯನಗರಕ್ಕೆ ಹೋಗಿ, ಅಲ್ಲಿ ನೆಲೆಸಿದನು. ದಕ್ಷಿಣ ಭಾರತದಲ್ಲಿಯ ಎಲ್ಲ ಕ್ಷೇತ್ರಗಳನ್ನು ತನ್ನ ಸಂಚಾರದಲ್ಲಿ ಸಂದರ್ಶಿಸಿದನು. ಹೋದಲ್ಲೆಲ್ಲ ತನ್ನ ಇಂಪಾದ ಹಾಡುಗಳಿಂದ ಜನತೆಯ ಮನವನ್ನು ಭಕ್ತಿ ಮಾರ್ಗದತ್ತ ಎಳೆಯುತ್ತಿದ್ದನು. ಈತನ ಪದ್ಯಗಳನ್ನು ಈಗಲೂ ಜನರು ಬಹಳ ಪ್ರೀತಿಯಿಂದ ಹಾಡುತ್ತಾರೆ, ಮತ್ತು ಹಾಡುಗಳನ್ನು ಕಿವಿಗೊಟ್ಟು ಕೇಳುತ್ತಾರೆ. ಪ್ರತಿಯೊಂದು ಪದ್ಯದ ಕೊನೆಗೆ "ಪುರಂದರ ವಿಠಲ" ಎಂದು ನಾಮಸ್ಮರಣೆ ಮಾಡಿದ್ದಾನೆ. ಸಂಚಾರ ಮಾಡುತ್ತಿರುವಾಗಲೇ ಹೈದರಾಬಾದ ಸಂಸ್ಥಾನದಲ್ಲಿ ಗದ್ವಾಲ ಎಂಬ ಊರಿನ ಹತ್ತಿರ ವನಪರ್ತಿ ಎಂಬಲ್ಲಿ ವೈಕುಂಠವಾಸಿಯಾದನು.

## ಅಭ್ಯಸನಗಳು

೧. ಕೃಷ್ಣಪ್ಪನಿಗೆ ವೈರಾಗ್ಯವು ಬರಲು ಕಾರಣವಾವುದು? ಅದರ ಬಗೆಗೆ ಸ್ವಲ್ಪದರಲ್ಲಿ ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.

(ಅ) ಸಹ್ಯಾದ್ರಿಯ ಅಡವಿಯಲ್ಲಿ.......ಎಂಬದೊಂದು ಹಳ್ಳಿಯಿದೆ.

(ಆ) ಆ ಹಳ್ಳಿಯಲ್ಲಿ...............ನಾಯಕನೆಂಬೊಬ್ಬ............ನು ಇದ್ದನು.

(ಇ) ಇವನು ಬಲು........ನು ಇದ್ದನು.

(ಈ) ಇವನು ಕಾಲಿಗೆ ........ ಕಟ್ಟಿಕೊಂಡು, ಕೈಯಲ್ಲಿ ............ ಗಳನ್ನು ಹಿಡಿದುಕೊಂಡು ಹಾಡುತ್ತ .... .... .... ಭಾರತವನ್ನೆಲ್ಲ ಸಂಚಾರ ಮಾಡಿದನು.

(ಉ) ಪ್ರತಿಯೊಂದು ಪದ್ಯದ ಕೊನೆಗೆ........ಎಂದು ನಾಮಸ್ಮರಣೆ ಮಾಡಿದನು.

(ಊ) ಸಂಚಾರದಲ್ಲಿದ್ದಾಗ............ ಸಂಸ್ಥಾನದಲ್ಲಿ... ........ಎಂಬ ಊರಿನ ಹತ್ತಿರ.......... ಎಂಬಲ್ಲಿ ವೈಕುಂಠವಾಸಿಯಾದನು.

# ೨೭. ರಾಮರಾಯನು

ಇವನು ಕೃಷ್ಣದೇವರಾಯನ ಅಳಿಯನು. ಕೃಷ್ಣರಾಯನ ತರುವಾಯ ಆವನ ತಮ್ಮ ಅಚ್ಯುತರಾಯನು ಪಟ್ಟಕ್ಕೆ ಬಂದನು. ಇವನು ಹೆಸರಿಗೆ ಮಾತ್ರ ರಾಜನಾದನು. ರಾಜ್ಯಭಾರವನ್ನೆಲ್ಲ ರಾಮರಾಯನೇ ಮಾಡುತ್ತಿದ್ದನು. ಅಚ್ಯುತರಾಯನು ಬೇಗನೆ ತೀರಿಕೊಂಡನು; ಅದರಂತೆ ಮುಂದೆ ಪಟ್ಟಕ್ಕೆ ಬಂದ ಅವನ ಮಗ ವೆಂಕಟರಾಯನೂ ಬೇಗನೆ ತೀರಿಕೊಂಡನು. ಸದಾಶಿವ ರಾಯನೆಂಬ ಒಬ್ಬ ಸಣ್ಣ ಹುಡುಗನು ಬಾಧ್ಯಸ್ಥನಾದನು; ಅವನನ್ನು ಪಟ್ಟಕ್ಕೆ ಕುಳ್ಳಿರಿಸಿ, ರಾಮರಾಯನೇ ಸರ್ವಾಧಿಕಾರಿಯಾಗಿಬಿಟ್ಟನು. ಅವನನ್ನು ಕೇಳದೆ ರಾಜ್ಯದಲ್ಲಿ ಒಂದು ಕಡ್ಡಿಯು ಕೂಡಾ ಅಲ್ಲಾಡುವಂತಿದ್ದಿಲ್ಲ. ಅವನು ಸ್ವತಃ ಶೂರನಿದ್ದಂತೆ ರಾಜಕಾರ್ಯ ಕುಶಲನೂ ಇದ್ದನಾದ್ದರಿಂದ ಬೀಳಲಿಕ್ಕೆ ಬಂದ ಸಾಮ್ರಾಜ್ಯವನ್ನು ತನ್ನ ಜಾಣತನದಿಂದ ಎತ್ತಿ ಹಿಡಿದನು. ವಿಜಾಪುರದ ಆದಿಲ ಶಹನಿಗೆ ಬೆಂಬಲಕೊಟ್ಟು ಗೋವಳಕೊಂಡ ಬೀದರದ ರಾಜ್ಯಗಳು ತಲೆಯೆತ್ತದಂತೆ ಮಾಡಿದನು. ಕನ್ಯಾಕುಮಾರಿಯಿಂದ ಭೀಮಾ ನದಿಯ ವರೆಗೆ ಇವನು ಸಾಮ್ರಾಜ್ಯವನ್ನು ಬೆಳೆಸಿದ್ದಲ್ಲದೆ, ತನ್ನಲ್ಲಿ ಬಲವಾದ ದಂಡನ್ನು ಸಿದ್ಧವಾಗಿಟ್ಟುಕೊಂಡನು. ವಿಜಯನಗರದ ರಾಜ್ಯದ ಸ್ಥಿತಿಯು ಮತ್ತೆ ಏರಿತು. ರಾಮರಾಯನ ಕಣ್ಣುಗಳು ನೆತ್ತಿಗೆ ಏರಿ, ಅವನಿಂದ ಕೆಲವು ಅನ್ಯಾಯಗಳು ನಡೆದವು.

ಈ ಸಮಯದಲ್ಲಿ ರಾಮರಾಯನ ದುರ್ವೈವದಿಂದ ಮುಸಲ್ಮಾನ ರಾಜರಲ್ಲಿ ಒಂದಾಗಬೇಕೆಂಬ ಹವ್ಯಾಸ ಹುಟ್ಟಿತು. ಅಹಮ್ಮದನಗರದ ಹುಸೇನ ನಿಜಾಮನಿಗೂ ವಿಜಾಪುರ ಆದಿಲಶಹನಿಗೂ ಬೀಗತನವಾಯಿತು. ದಕ್ಷಿಣದಲ್ಲಿಯ ಮುಸಲ್ಮಾನ ಅರಸರೆಲ್ಲರೂ ಒಕ್ಕಟ್ಟಾದರು. ಇದಕ್ಕೆ ದಿಲ್ಲಿಯ ಅಕಬರ ಬಾದಶಹನ ಒಪ್ಪಿಗೆಯೂ ದೊರೆಯಿತು. ಎಲ್ಲರೂ ಒಂದಾಗಿ ವಿಜಯನಗರದ ರಾಜ್ಯವನ್ನು ಮುರಿಯದೆ, ತಮ್ಮ ಗತಿ ನೆಟ್ಟಗಾಗದೆಂದು ಜಾಲನಾಪುರದಲ್ಲಿ ಕೂಡಿ ಮಾತನಾಡಿದರು. ಎರಡೂ ಪಕ್ಷದವರು ಯುದ್ಧದ ಸೌರಣೆಯನ್ನು ನಡೆಸಿದರು. ಕ್ರಿ. ಶ. ೧೫೬೫ನೆಯ ಇಸವಿಯ ಜಾನೇವಾರಿ ೨೬ನೆಯ ತಾರೀಖಿನ ದಿವಸ ರಕ್ಕಸಗಿ, ತಂಗಡಗಿಯ ಹತ್ತರ ವಿಜಯನಗರದವರ



ರಾಮರಾಯನು “ ರಾಜಹಂಸಾಮೃತ ” ವೆಂಬ ಹೆಸರಿನ ಆನೆಯ ಮೇಲೆ ಕುಳಿತು ಯುದ್ಧಕ್ಕೆ ಹೊರಟ ನೋಟ

ಸೈನ್ಯವು ಬೀಡು ಬಿಟ್ಟಿತು. ಮುಸಲ್ಮಾನರ ದಂಡು ನಾಲವತ್ತವಾಡದ ಕಡೆಗೆ ಇಳಿಯಿತು. ರಾಮರಾಯನು ಯಾರು ಯಾರು ಎಲ್ಲೆಲ್ಲಿ ನಿಲ್ಲಬೇಕೆಂಬದನ್ನು ಮೊದಲೇ ಗೊತ್ತುಮಾಡಿ ಇಟ್ಟಿದ್ದನು. "ರಾಜಹಂಸಾಮೃತ"ವೆಂಬ ಹೆಸರಿನ ತನ್ನ ಆನೆಯಮೇಲೆ ಕುಳಿತು, ತನ್ನದಂಡಾಳುಗಳಿಗೆ ಹುರಿದುಂಬಿಸುತ್ತಿದ್ದನು. ಮೊದಲನೆಯ ದಿವಸ ಯುದ್ಧದಲ್ಲಿ ಕನ್ನಡ ಬಂಟರ ಹೊಡೆತಕ್ಕೆ ಮುಸಲ್ಮಾನರ ದಂಡು ನಿಲ್ಲದೆ ಓಡಹತ್ತಿತು; ಅವರಿಗೆ ಸೋಲಾಯಿತು. ರಾಮರಾಯನ ದಂಡಿನವರಿಗೆ ಜಯವಾದ್ದರಿಂದ ಸಂಜೆಗೆ ತಮ್ಮ ತಮ್ಮ ಪಾಳ್ಯಗಳಿಗೆ ಹೋಗಿ ಸಂತೋಷದಿಂದ ನಲಿಯುತ್ತ ವೈಮರೆತು ಕೂತರು. ಈ ಸಂಧಿಯನ್ನು ಸಾಧಿಸಿ ಮುಸಲ್ಮಾನರು ಮೋಸದಿಂದ ವಿಜಯನಗರದವರ ಪಾಳಯವನ್ನು ಮುತ್ತಿ ಸುತ್ತುಗಟ್ಟಿದರು. ವಿಜಯನಗರದ ಸೈನ್ಯದಲ್ಲಿ ಗೊಂದಲವೇ ಗೊಂದಲ. ಅವರು ಗಾಬರಿಯಾಗಿ ದಿಕ್ಕಾಪಾಲಾಗಿ ಓಡತೊಡಗಿದರು. ರಾಮರಾಯನು ಹತಾಶನಾಗಿ ತನ್ನ ಮಗನ ಸರಿಯೆಂದು ತಿಳಿದ ಆದಿಲಶಹನ ಎದುರಿಗೆ ಹೋಗಿ "ನನ್ನನ್ನು ಕೊಲ್ಲಬೇಕೆಂದು ನಿನಗೆ ಅನಿಸುತ್ತಿದ್ದರೆ, ಕೊಂದುಬಿಡು" ಎಂದು ದೇವರ ಧ್ಯಾನ ಮಾಡುತ್ತ ನಿಂತುಬಿಟ್ಟನು. ಆದಿಲಶಹನು ರಾಮರಾಯನು ಮಾಡಿದ ಉಪಕಾರವನ್ನು ಸ್ಮರಿಸದೆ ಅವನ ರುಂಡವನ್ನು ಹಾರಿಸಿಬಿಟ್ಟನು. ಈ ಯುದ್ಧದಲ್ಲಿ ಒಂದು ಲಕ್ಷ ಹಿಂದೂ ಜನರು ಸತ್ತರು. ರಾಮರಾಯನ ತಲೆ ಹಾರಿಸಿದವನು ನಿಜಾಮಶಹನು, ಆದಿಲಶಹನಲ್ಲವೆಂದು ಕೆಲವರ ಮತವಿದೆ.

ವಿಜಯನಗರಕ್ಕೆ ಈ ಸುದ್ದಿಯು ಮುಟ್ಟಿದ ಕ್ಷಣವೇ ರಾಮರಾಯನ ರಾಣಿಯರು ಇನ್ನು ಮುಸಲ್ಮಾನರ ಕೈಗೆ ಸಿಕ್ಕರೆ ತಮ್ಮ ಗತಿ ನೆಟ್ಟಗಾಗದೆಂದು ಭಾವಿಸಿ ವಿಷ ಕುಡಿದು ಸತ್ತರು. ಮುಸಲ್ಮಾನರು ವಿಜಯನಗರವನ್ನು ಹೊಕ್ಕು ಹಾವಳಿ ನಡೆಸಿದರು. ದೇವಾಲಯಗಳನ್ನು ಕೆಡವಿದರು; ಅರಮನೆಗಳನ್ನು ಸುಟ್ಟರು. ಜನರನ್ನು ಸುಲಿದು ಸಂಪತ್ತಿಯನ್ನು ಒಯ್ದರು. ಈ ಸುಲಿಗೆಯು ಎಡೆಬಿಡದೆ ಐದು ತಿಂಗಳುಗಳವರೆಗೆ ನಡೆದಿತ್ತು. ಅವರಿಗೆ ಲೆಕ್ಕವಿಲ್ಲದಷ್ಟು ಸಂಪತ್ತಿಯು ಸಿಕ್ಕಿತು. ವಿಜಯನಗರ ಸಾಮ್ರಾಜ್ಯವು ಹಾಳಾಯಿತು !

## ಅಭ್ಯಸನಗಳು

೧. ರಕ್ಕಸಗಿ–ತಂಗಡಗಿ ಯುದ್ಧದ ಬಗೆಗೆ ಸಂಕ್ಷಿಪ್ತವಾಗಿ ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ—

(ಅ) ರಾಮರಾಯನು........ನ ಅಳಿಯನು.

(ಆ) ಇವನು ರಾಜ್ಯವನ್ನು ... ........ಯಿಂದ... ............ನದಿಯ ವರೆಗೆ ಬೆಳೆಸಿದನು.

(ಇ) ಅಹಮ್ಮದನಗರದ............ಗೂ................ದ ಆದಿಲಶಹನಿಗೂ ಬೀಗತನವಾಯಿತು.

(ಈ) ಕ್ರಿ. ಶ. .... .... .... ನೆಯ ಇಸವಿಯ .... .... ....ತಿಂಗಳದ ........ನೆಯ ತಾರೀಖಿನ ದಿವಸ ರಕ್ಕಸಗಿ–ತಂಗಡಗಿಯ ಯುದ್ಧವಾಯಿತು.

(ಉ) .... .... .... ಎಂಬ ಹೆಸರಿನ ತನ್ನ ಆನೆಯ ಮೇಲೆ ಕುಳಿತು .... .... .... ನು ತನ್ನ........ಗಳಿಗೆ ಹುರಿದುಂಬಿಸುತ್ತಿದ್ದನು.

(ಊ) ಈ ಯುದ್ಧದಲ್ಲಿ .... .... .... .... ಲಕ್ಷ ಹಿಂದುಗಳು ಸತ್ತರು.

(ಎ) ವಿಜಯನಗರದ ಸುಲಿಗೆಯು ಎಡೆಬಿಡದೆ .... .... ತಿಂಗಳುಗಳ ವರೆಗೆ ನಡೆಯಿತು.

# ೨೮. ಮುಹಮ್ಮದ ಆದಿಲಶಹನು

ಇವನು ಆಸಾರ ಮಹಾಲನ್ನು ಕಟ್ಟಿಸಿದ ಇಬ್ರಾಹಿಮಶಹನ ಮಗನು. ವಿಜಾಪುರದ ಅರಸರಲ್ಲಿ ಈತನು ಬಹು ಕಲಾಪ್ರಿಯನು. ಈತನ ಒಲವು ಯುದ್ಧ ಮಾಡುವದರ ಕಡೆಗೆ ಇರಲಿಲ್ಲ. ದೊಡ್ಡ ದೊಡ್ಡ ಇಮಾರತುಗಳನ್ನು ಕಟ್ಟಿಸುವ ಹವ್ಯಾಸವು ಮಾತ್ರ ಇವನಲ್ಲಿ ಮೊದಲಿನಿಂದಲೂ ಮನೆಮಾಡಿ ಕೊಂಡಿತ್ತು. ಇವನ ಕಾಲಕ್ಕೆ ಹೇಳಿಕೊಳ್ಳುವಂಥ ಯುದ್ಧಗಳು ಆಗಲಿಲ್ಲ. ರಾಜ್ಯದಲ್ಲೆಲ್ಲ ಶಾಂತತೆಯು ನೆಲೆಗೊಂಡಿತ್ತು. ಆದುದರಿಂದಲೇ ಇವನಿಗೆ ಇಮಾರತುಗಳನ್ನು ಕಟ್ಟಿಸಲು ಸಾಕಷ್ಟು ಅವಕಾಶವು ಸಿಕ್ಕಿತು ಈತನಿಗೆ ಮುರಾರಿರಾಯನೆಂಬ ಒಬ್ಬ ಹಿಂದೂ ಮಂತ್ರಿಯು ಇದ್ದನು. ಅವನು ಬಲು



ಮುಹಮ್ಮದ ಆದಿಲಶಹನು

ಜಾಣನೂ ವಿಶ್ವಾಸಿಕನೂ ಇದ್ದನು. ಅವನಿಗೆ ರಾಜ್ಯದ ವ್ಯವಸ್ಥೆಯನ್ನೆಲ್ಲ ಒಪ್ಪಿಸಿ ತಾನು ಕಟ್ಟಡಗಳನ್ನು ಕಟ್ಟಿಸುವ ಉದ್ಯೋಗಕ್ಕೆ ನಿಂತುಬಿಟ್ಟನು.

ಇವನು ಕಟ್ಟಿಸಿದ ಬೋಲಗುಮುಟವು ಜಗತ್ತನ್ನೇ ಬೆರಗುಗೊಳಿಸಿದೆ.

# ೨೯. ಚಾಂದಬೀಬಿಯು

ಈಕೆಯು ಅಹಮ್ಮದನಗರದ ಹುಸೇನ ನಿಜಾಮಶಹನ ಮಗಳು. ತಂದೆ-ತಾಯಿಗಳಿಗೆ ಈಕೆಯು ಒಳ್ಳೆಯ ಮುದ್ದು ಮಗಳಾಗಿದ್ದಳು. ಇವಳಂಥ ಸುಂದರ ಹುಡಿಗೆಯರು ಆಗಿನ ಕಾಲಕ್ಕೆ ಯಾರೂ ಇರಲಿಲ್ಲ. ಅರಸು-ಮಗಳಿಗೆ ಅವಶ್ಯವಿದ್ದ ಎಲ್ಲ ಶಿಕ್ಷಣವನ್ನು ಹುಸೇನನು ಅವಳಿಗೆ ಕೊಡಿಸಿದ್ದನು. ಚಿತ್ರತೆಗೆಯುವದು, ಬಣ್ಣಕೊಡುವದು, ಹಾಡುವದು, ವೀಣೆಯನ್ನು ಬಾರಿಸುವದು ಇವೆಲ್ಲವೂ ಇವಳಿಗೆ ಚೆನ್ನಾಗಿ ಬರುತ್ತಿದ್ದವು. ಆ ನಾಡಿನ ಭಾಷೆಯಾದ ಮರಾಠಿಯಲ್ಲಿ ಓದಲಿಕ್ಕೂ ಬರೆಯಲಿಕ್ಕೂ ಬರುತ್ತಿತ್ತು. ಅರಬೀ, ಪಾರಸೀ ಭಾಷೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಳು. ಕುದುರೆ ಹತ್ತುವದೂ, ಬೇಟೆಯಾಡುವದೂ, ಕತ್ತಿಯನ್ನು ತಿರುಗಿಸುವದೂ ಇವಳ ಪ್ರೀತಿಯ ವಿಷಯಗಳಾಗಿದ್ದವು. ಒಟ್ಟನಲ್ಲಿ, ರಾಜಕುಮಾರಿಯು ಅರಿತಿರಬೇಕಾದ ಎಲ್ಲ ಕಲೆಗಳೂ ಇವಳಲ್ಲಿ ಮನೆಮಾಡಿಕೊಂಡಿದ್ದವು. ಈಕೆಗೆ ಹತ್ತು ವರುಷಗಳು ತುಂಬುವಷ್ಟರಲ್ಲಿಯೇ ಇವಳ ತಂದೆಯು ಇವಳನ್ನು ವಿಜಾಪುರದ ಆಲಿ ಆದಿಲಶಹನಿಗೆ ಲಗ್ನ ಮಾಡಿಕೊಟ್ಟನು.

ಆಲಿ ಆದಿಲಶಹನು ಅವಳಿಗೆ ಯೋಗ್ಯ ವರನಾಗಿದ್ದನು. ಚಾಂದಬೀಬಿಯು ಆವನ ಮೆಚ್ಚುನಚ್ಚಿನ ರಾಣಿಯಾಗಿಬಿಟ್ಟಳು. ಅವನು ತಾನು ಹೋದ ಹೋದಲ್ಲೆಲ್ಲ ಅವಳನ್ನು ಕರಕೊಂಡು ಹೋಗುತ್ತಿದ್ದನು. ಬೇಟೆಯಾಡುವಾಗ, ಕುದುರೆ ಸವಾರಿಮಾಡುವಾಗ, ಯುದ್ಧಕ್ಕೆ ಹೋಗುವಾಗ, ಸಿಂಹಾಸನದ ಮೇಲೆ ಕುಳಿತುಕೊಳ್ಳುವಾಗ, ದರಬಾರ ನಡೆದಾಗ, ಮಂತ್ರಿಗಳ ಕೂಡ ರಾಜ್ಯಭಾರದ ಪ್ರಶ್ನೆಗಳನ್ನು ಚರ್ಚೆಮಾಡುವಾಗ, ಮೊದಲಾದ ಎಲ್ಲ ಸಮಯಗಳಲ್ಲಿ ಅವಳನ್ನು ಅವನು ಬಿಟ್ಟು ಇರಲಿಲ್ಲ. ಇದರಿಂದ ಅವಳಿಗೆ ಒಂದು ದೊಡ್ಡ ಲಾಭವಾಯಿತು. ರಾಜಕಾರಣದ ವಿಷಯಗಳನ್ನೆಲ್ಲ ಅರಿತುಕೊಳ್ಳಲು ಬಂಗಾರದಂಥ ಸುಸಂಧಿಯು ದೊರೆತು, ಅವುಗಳಲ್ಲಿ ಅವಳು ಒಳ್ಳೆ ನಿಪುಣಳಾಗಿಬಿಟ್ಟಳು. ಪ್ರಜೆಗಳಂತೂ ಅವಳ ಮೇಲೆ ಪಂಚಪ್ರಾಣರಾಗಿಬಿಟ್ಟರು. ಪುರುಷರನ್ನು ಮಿಕ್ಕಿ ಕೆಲಸ ಮಾಡುವ ಅವಳ ದಿಟ್ಟತನವನ್ನೂ ಬುದ್ಧಿವಂತಿಕೆಯನ್ನೂ ಜನರು ಬಾಯಿತುಂಬ ಕೊಂಡಾಡಿದರು.

ಈ ಪ್ರಕಾರ ಆದರ್ಶ ದಂಪತಿಗಳಾಗಿ ಪ್ರಜೆಗಳಿಗೆಲ್ಲ ಬೇಕಾಗಿ ಸುಖದಿಂದ
ಕಾಲಕಳೆಯುತ್ತಿರುವಾಗ, ಒಮ್ಮಿಂದೊಮ್ಮೆಲೆ ಅವಳ ಗಂಡನು ತೀರಿ
ಕೊಂಡುಬಿಟ್ಟನು. ಆಗಂತೂ ಅವಳಿಗೆ ಆಕಾಶವೇ ಕಡಕೊಂಡು ಬಿದ್ದಂತಾ
ಯಿತು ! ಅವಳಿಗೆ ಇನ್ನೂ ಮಕ್ಕಳಾಗಿರಲಿಲ್ಲ. ಆಗ ಅವಳಿಗೆ ಇಪ್ಪತ್ತಾರು
ವರುಷಗಳು ಮಾತ್ರ ಆಗಿದ್ದವು. ಅಲಿ ಆದಿಲಶಹನ ತರುವಾಯ ಅವನ
ತಮ್ಮನ ಮಗನಾದ ಇಬ್ರಾಹಿಮ ಆದಿಲಶಹನೆಂಬೊಬ್ಬ ಚಿಕ್ಕ ಮಗುವು
ಪಟ್ಟಕ್ಕೆ ಬಾಧ್ಯಸ್ಥನಾದನು. ಚಿಕ್ಕ ಮಗುವಿನ ಪಾಲಕಳಾಗಿ ಚಾಂದಬೀಬಿ
ರಾಣಿಯೇ ಆಳಬೇಕೆಂದು ಪ್ರಜೆಗಳೆಲ್ಲರೂ ಒಮ್ಮತದಿಂದ ಹಟಹಿಡಿದದ್ದರಿಂದ,
ಅವಳು ತನ್ನ ಗಂಡ ಸತ್ತ ದುಃಖವನ್ನು ನುಂಗಿಕೊಂಡು ರಾಜ್ಯಭಾರವನ್ನು
ಹೊರಲು ಒಪ್ಪಿದಳು. ಅವಳ ಆಳಿಕೆಯೆಂದರೆ ವಿಜಾಪುರ ರಾಜ್ಯದ ಪ್ರಜೆಗಳ
ಚಿನ್ನಗಾಲ. ದಿನಾಲು ಮುಂಜಾನೆಯಿಂದ ಸಂಜೆಯ ವರೆಗೆ ಪ್ರಜಾಹಿತದ ಕಾರ್ಯ
ಗಳಲ್ಲಿ ಮಗ್ನಳಾಗಿಬಿಡುತ್ತಿದ್ದಳು ರಾಜ್ಯವು ಒಳ್ಳೆ ವೈಭವದಿಂದ ಮೆರೆಯ
ಹತ್ತಿತು. ಪ್ರಜೆಗಳ ಹಿತಕ್ಕಾಗಿ ಎಷ್ಟೋ ಇಮಾರತುಗಳನ್ನೂ, ಕೆರೆ--ಬಾವಿ
ಗಳನ್ನೂ, ಮಾರ್ಗಗಳನ್ನೂ ಕಟ್ಟಿಸಿದಳು.

ಇದೇ ಸಮಯಕ್ಕೆ ಅವಳ ತವರೂರಾದ ಅಹಮ್ಮದನಗರದಲ್ಲಿ ಪಟ್ಟದ
ಸಲುವಾಗಿ ಎರಡು ಬಣಗಳ ನಡುವೆ ಒಂದು ದೊಡ್ಡ ಹೋರಾಟವೇ ಎದ್ದಿತು.
ನಿಜವಾದ ಹಕ್ಕುದಾರನ ಪಕ್ಷದವರು ಚಾಂದಬೀಬಿಯ ಹತ್ತಿರ ಬಂದು ಅವ
ಳಿಗೆ ಸಹಾಯಮಾಡಲು ಒತ್ತಾಯಪಡಿಸಿದರು. ಇಷ್ಟೊತ್ತಿಗೆ ಇಬ್ರಾಹಿಮನು
ದೊಡ್ಡವನಾಗಿದ್ದುದರಿಂದ ಅವಳು ಅಲ್ಲಿಗೆ ಹೋಗಲು ಒಪ್ಪಿದಳು. ಮತ್ತೊಂದು
ಬಣದವರು ದಿಲ್ಲಿಗೆ ಹೋಗಿ ಅಕಬರ ಬಾದಶಹನ ಸಹಾಯವನ್ನು ಕೋರಿದರು.
ಚಾಂದಬೀಬಿಯು ಅಹಮ್ಮದನಗರಕ್ಕೆ ಹೋಗಿ ಎರಡೂ ಬಣದವರನ್ನು
ಒಂದುಗೂಡಿಸಲು ಬಹಳಷ್ಟು ಹೆಣಗಾಡಿದಳು. ಆದರೆ, ಅದೆಲ್ಲ ಹೊಳೆಯಲ್ಲಿ
ಹುಣಸೆಹಣ್ಣು ತೊಳೆದಂತೆ ವ್ಯರ್ಥವಾಯಿತು. ಇಷ್ಟರಲ್ಲಿ ಅಕಬರ ಬಾದಶಹನ
ಮಗನಾದ ಮುರಾದನು ಒಂದು ದೊಡ್ಡ ದಂಡು ತಕ್ಕೊಂಡು ಬಂದು ಅಹಮ್ಮದ
ನಗರಕ್ಕೆ ಮುತ್ತಿಗೆ ಹಾಕಿದನು. ಇದನ್ನು ಮೊದಲೇ ಅರಿತಿದ್ದ ಚಾಂದ
ಬೀಬಿಯು ಆಹಾರ, ನೀರು ಮೊದಲಾದ ಎಲ್ಲ ಸಾಮುಗ್ರಿಗಳ ಪುರವಠೆಯನ್ನು
ಊರೊಳಗಿನ ಎಲ್ಲ ಜನರಿಗೆ ವರುಷಾನುವರುಷ ಸಾಕಾಗುವಷ್ಟು ಮಾಡಿಸಿ

ಬಿಟ್ಟಿದ್ದಳು. ಮುತ್ತಿಗೆಯು ಬಹಳ ದಿನಗಳ ವರೆಗೆ ನಡೆಯಿತು. ಅವಳು ಹಣಿಯದೆ ಧೈರ್ಯದಿಂದ ಕೋಟೆಯನ್ನು ರಕ್ಷಿಸಿದಳು. ಸ್ವತಃ ಖಡ್ಗವನ್ನು ಹಿಡಿದುಕೊಂಡು ಎಲ್ಲ ಕಡೆಗೂ ಮೇಲ್ವಿಚಾರಣೆ ಮಾಡುತ್ತ ತನ್ನ ದಂಡಿನವರಿಗೆ ಧೈರ್ಯ ಕೊಡುತ್ತಿದ್ದಳು. ಮುರಾದನು ಬೇಸತ್ತು ಒಪ್ಪಂದ ಮಾಡಿ



ಚಾಂದಬೀಬಿ

ಕೊಂಡು ಹೋಗಿಬಿಟ್ಟನು. ಚಾಂದಬೀಬಿಯು ಇಷ್ಟೆಲ್ಲ ಶೂರತನವನ್ನು ಕಣ್ಣಾರೆ ಕಂಡೂ, ಅಲ್ಲಿಯ ಸರದಾರರಿಗೆ ಬುದ್ಧಿ ಬರಲಿಲ್ಲ. ಅವರಲ್ಲಿ ಕೆಲ ದುಷ್ಟರು ಒಳಸಂಚು ಮಾಡಿ ವಿಶ್ವಾಸಘಾತದಿಂದ ಅವಳ ಕೊಲೆ ಮಾಡಿದರು.

## ಅಭ್ಯಸನಗಳು

೧. ಹುಸೇನ ನಿಜಾಮಶಹನು ಅವಳಿಗೆ ಯಾವ ಯಾವ ವಿದ್ಯೆಗಳನ್ನು ಕಲಿಸಿದನು ?

೨. ಚಾಂದಬೀಬಿ ಮತ್ತು ಅಲಿ ಆದಿಲಶಹ ಇವರಿಗೆ ಆದರ್ಶ ದಂಪತಿಗಳೆಂದು ಏಕೆ ಕರೆಯುವಿರಿ ?

೩. ತೆರವಿದ್ದ ಸ್ಥಳಗಳಲ್ಲಿ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ಈಕೆಯು... ........ದ............ನಿಜಾಮಶಹನ ಮಗಳು.

(ಆ) ಇವಳಿಗೆ...........ವರುಷಗಳು ತುಂಬಿದಾಗ...............ದ ಆದಿಲಶಹನ ಕೂಡ ಈಕೆಯ ಲಗ್ನವಾಯಿತು.

(ಇ) ಇವರಿಬ್ಬರು....... ದಂಪತಿಗಳಾಗಿದ್ದರು.

(ಈ) ಇವಳ ಗಂಡನು ತೀರಿಕೊಂಡಾಗ ಇವಳಿಗೆ...........ವರುಷ ಗಳಾಗಿದ್ದವು.

(ಉ) ದಿಲ್ಲಿಯ...........ಬಾದಶಹನು ತನ್ನ ಮಗನಾದ................ ನನ್ನು......... .....ಕ್ಕೆ ಮುತ್ತಿಗೆ ಹಾಕಲು ಒಂದು ದೊಡ್ಡ.............ಕೊಟ್ಟು ಕಳಿಸಿದನು.

(ಊ) ಕೆಲ ದುಷ್ಟರು ಒಳಸಂಚು ಮಾಡಿ........ದಿಂದ ಅವಳ........ ಮಾಡಿದರು.

# ೩೦. ಕನಕದಾಸರು

ಧಾರವಾಡ ಜಿಲ್ಹೆಯಲ್ಲಿ ಬಂಕಾಪುರದ ಹತ್ತಿರಲ್ಲಿದ್ದ ಬಾಡ ಎಂಬ ದೊಂದು ಹಳ್ಳಿ. ಅಲ್ಲಿ ಬೀರಪ್ಪನೆಂಬೊಬ್ಬ ಹಂಡೇಗುರುಬನು ಇದ್ದನು. ಈತನು ವಿಜಯನಗರದ ಅರಸರ ಪಾಳಯಗಾರನಿದ್ದನು. ಸುತ್ತುಮುತ್ತಲಿನ ಹಳ್ಳಿಗಳಿಂದ ಕಂದಾಯವನ್ನು ಎತ್ತಿ ಅರಸನಿಗೆ ಸಲ್ಲಿಸುವದರಲ್ಲಿ ಒಳ್ಳೆ ಪ್ರಾಮಾಣಿಕನೆಂದು ಹೆಸರಾಗಿದ್ದನು. ಇವನ ಹೆಂಡತಿಯ ಹೆಸರು ಬಚ್ಚವ್ವ. ಇವರಿಗೆ ಎಷ್ಟೋ ವರುಷಗಳ ವರೆಗೆ ಮಕ್ಕಳೇ ಆಗಲಿಲ್ಲ. ಕೊನೆಗೆ ಒಂದು ಗಂಡು ಕೂಸು ಹುಟ್ಟಿತು. ಅದಕ್ಕೆ ತಿಮ್ಮನೆಂದು ಹೆಸರಿಟ್ಟರು. ಈ ತಿಮ್ಮನೇ ಮುಂದೆ ಕನಕದಾಸನಾದನು. ತಿಮ್ಮನಿಗೆ ಆರು ವರುಷಗಳು ತುಂಬಿದ ಬಳಿಕ ಅವನ ತಂದೆಯು ತೀರಿಕೊಂಡನು. ಮುಂದೆ ತಾಯಿಯೇ ಈತನನ್ನು ಜೋಕೆ ಮಾಡಿದಳು. ಗರಡೀ ಮನೆಗೆ ತಪ್ಪದೇ ಹೋಗಿ ಸಾಧಕಗಳನ್ನೆಲ್ಲ ಮಾಡಿ ಒಳ್ಳೆ ಗಟ್ಟಿಗನಾಗಿದ್ದನು.

ದೊಡ್ಡವನಾದಮೇಲೆ ಈತನಿಗೆ ನೆಲದಲ್ಲಿ ಹೂಳಿಟ್ಟ (ಕನಕ) ಬಂಗಾರವು ಹೇಗೋ ಗೊತ್ತಾಗಲು ಪ್ರಾರಂಭವಾಯಿತು. ಇವನು ತೋರಿಸಿದ ಸ್ಥಳವನ್ನು ಅಗಿದು ನೋಡಲು ಅಲ್ಲಿ ಕನಕವು ಸಿಗಲಿಕ್ಕೆ ಹತ್ತಿತು. ಈ ಪ್ರಕಾರ ಈತನಿಗೆ ಏಳು ಸಲ ಕನಕವು ಸಿಕ್ಕಿತು. ಅಂದಿನಿಂದ ಈತನಿಗೆ ಕನಕನೆಂದು ಜನರು ಕರೆಯಹತ್ತಿದರು. ತನಗೆ ಸಿಕ್ಕ ಬಂಗಾರವನ್ನು ಬಡ ಬಗ್ಗರಿಗೆ ದಾನಮಾಡಿಬಿಡುತ್ತಿದ್ದನು. ಹೀಗೆ ಮಾಡಿದ್ದರಿಂದ ಆ ಊರ ಜನರೆಲ್ಲರೂ ಈತನು ಹೇಳಿದಂತೆ ಕೇಳಲಿಕ್ಕೆ ಹತ್ತಿದರು; ಈತನು ಅವರ ಮುಂದಾಳಾದನು. ಆಗ ಇವನನ್ನು ಎಲ್ಲರೂ ಕನಕನಾಯಕನೆಂದು ಕರೆಯಹತ್ತಿದರು. ತನಗೆ ಸಿಕ್ಕ ಬಂಗಾರದಿಂದ ಕಾಗಿನೆಲೆ ಎಂಬ ಗ್ರಾಮದಲ್ಲಿ ಒಂದು ಸುಂದರವಾದ ಗುಡಿಯನ್ನು ಕಟ್ಟಿಸಿ ಬಾಡದಲ್ಲಿದ್ದ ಆದಿಕೇಶವನ ಮೂರ್ತಿಯನ್ನು ಅಲ್ಲಿಗೆ ಒಯ್ದು ಆ ಗುಡಿಯಲ್ಲಿ ಸ್ಥಾಪಿಸಿದನು.

ಆದಿಕೇಶವನು ಒಮ್ಮೆ ಅವನ ಕನಸಿನಲ್ಲಿ ಬಂದು ಅವನಿಗೆ ತನ್ನ ದಾಸನಾಗಲು ಹೇಳಿ ಮಾಯವಾಗಿಬಿಟ್ಟನಂತೆ. ಕನಕನಾಯಕನು ಅಂದಿನಿಂದ ಪ್ರಪಂಚದ ಮೋಹಕ್ಕೆ ಬೀಳದೆ ಸನ್ಯಾಸಿಯಾಗಿ ಹಾಡುತ್ತ ಊರೂರು ತಿರುಗಾಡಲಿಕ್ಕೆ ಹತ್ತಿದನು. ಆಗ ಜನರು ಅವನಿಗೆ ಕನಕದಾಸನೆಂದು ಕರೆಯ

ಹತ್ತಿದರು. ಪುರಂದರದಾಸರಂತೆ ಇವನೂ ಕಾಲಲ್ಲಿ ಗೆಜ್ಜೆಯನ್ನು ಕಟ್ಟಿಕೊಂಡು ಕೈಯಲ್ಲಿ ತಾಳ-ತಂಬೂರಿಗಳನ್ನು ಹಿಡಿದುಕೊಂಡು ಭಕ್ತಿತತ್ವದ ಪದ್ಯಗಳನ್ನು ಹಾಡುತ್ತ ಕರ್ನಾಟಕದಲ್ಲೆಲ್ಲ ಸಂಚಾರ ಮಾಡಿದನು. ಹೋದಲ್ಲೆಲ್ಲ ಈತನ ಹಾಡುಗಳ ಪರಿಣಾಮವು ಜನರ ಮನಸಿನ ಮೇಲೆ ಚೆನ್ನಾಗಿಯೆ ಆಯಿತು. ಹೀಗೆ ಸಂಚಾರ ಮಾಡುತ್ತ ಮಾಡುತ್ತ ಒಮ್ಮೆ ಉಡುಪಿ ಶ್ರೀಕೃಷ್ಣನ ದರ್ಶನಕ್ಕೆ ಹೋದನು. ಇವನು ಕುರುಬನಾದ್ದರಿಂದ ಅಲ್ಲಿಯ ಬ್ರಾಹ್ಮಣ ಪೂಜಾರಿಗಳು ಈತನನ್ನು ಒಳಗೆ ಬಿಡದೆ ಹೊರಗಿಂದ ಹೊರಗೇ ಅಟ್ಟಿಬಿಟ್ಟರು. ದರ್ಶನವಾಗಿಯೇ ತೀರಬೇಕೆಂಬ ಉತ್ಕಟೇಚ್ಛೆಯಿಂದ ಅವನು ಗುಡಿಯ ಹಿಂಭಾಗದಲ್ಲಿ



ಉಡುಪಿಯಲ್ಲಿ ಕನಕನಿಗೆ ಶ್ರೀಕೃಷ್ಣನ ದರ್ಶನ

ಹೋಗಿ ದೇವರ ನಾಮಸ್ಮರಣೆಯಲ್ಲಿ ಮಗ್ನನಾಗಿ ಕುಳಿತುಬಿಟ್ಟನು. ಅಲ್ಲಿಯವರೆಗೆ ಪೂರ್ವದಿಕ್ಕಿಗೆ ಮುಖವಾಗಿದ್ದ ಮೂರ್ತಿಯು ಪಶ್ಚಿಮಕ್ಕೆ ಪಶ್ಚಿಮದ ಗೋಡೆಯಲ್ಲಿ ಒಂದು ಕಿಂಡಿಯನ್ನುಂಟು ಮಾಡಿ ಕನಕದಾಸನಿಗೆ ಕಾಣಿಸಿಕೊಂಡಿತಂತೆ! ಈಗಲೂ ಆ ಮೂರ್ತಿಯು ಪಶ್ಚಿಮಕ್ಕೆ ಮುಖಮಾಡಿ ಕುಳಿತುಬಿಟ್ಟಿದೆ; ಮತ್ತು ಆ ಕಿಂಡಿಗೆ 'ಕನಕನ ಕಿಂಡಿ' ಎಂದು ಕರೆಯುತ್ತಾರೆ. ಆ ಕಿಂಡಿಯ ಎದುರಿಗೆ ಈತನು ಕುಳಿತ ಸ್ಥಳದಲ್ಲಿ ಕನಕದಾಸನ ಗುಡಿಯನ್ನು ಕಟ್ಟಿದ್ದಾರೆ.

ಇವನ ಹಾಡುಗಳು ಭಕ್ತಿಯಿಂದ ತುಳುಕುತ್ತವೆ. ಪ್ರತಿಯೊಂದು ಪದ್ಯದ ಕೊನೆಗೆ ಕಾಗಿನೆಲೆಯ ಆದಿಕೇಶವನ ನಾಮಸ್ಮರಣೆಯನ್ನು ಮಾಡಿದ್ದಾನೆ. ಹೋದಲ್ಲೆಲ್ಲ ಜನರಿಗೆ ನೀತಿಯ ಮಾರ್ಗವನ್ನು ತೋರಿಸಿದನು. ಇವನ ಹಾಡುಗಳಲ್ಲಿ ಎಷ್ಟೋ ಗೂಢಾರ್ಥವಿರುವ ಶಬ್ದಗಳು ಇಲ್ಲವೆ ಪದಗಳು ಕಂಡು ಬರುತ್ತವೆ. ಅವುಗಳಿಗೆ 'ಕನಕನ ಮುಂಡಿಗೆಗಳು' ಎಂದು ಅನ್ನುತ್ತಾರೆ. ಈತನು ತೊಂಬತ್ತೆಂಟು ವರುಷ ಬಾಳಿದನು. ಮತ್ತು ನಾಡೆಲ್ಲ ಸುತ್ತಾಡಿ ಕೊನೆಗೆ ಆದಿಕೇಶವನ ದೇವಾಲಯದಲ್ಲಿಯೇ ಪ್ರಾಣತ್ಯಾಗಮಾಡಿದನು.

## ಅಭ್ಯಸನಗಳು

೧. ಇವನಿಗೆ ಕನಕ, ಕನಕನಾಯಕ ಮತ್ತು ಕನಕದಾಸ ಎಂಬ ಹೆಸರುಗಳು ಯಾಕೆ ಬಂದವು ?

೨. ಕನಕದಾಸನಂತೆ ನಿಮಗೆ ಮತ್ತಾವ ದಾಸರ ಚರಿತ್ರೆ ಗೊತ್ತಿದೆ? ಹೇಳಿರಿ.

೩. ಕೆಳಗೆ ಕೆಲವು ಅಪೂರ್ಣ ವಾಕ್ಯಗಳಿವೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದ ಒಂದನ್ನು ಆರಿಸಿ ತುಂಬಿ ವಾಕ್ಯವನ್ನು ಪೂರ್ಣಮಾಡಿ ಬರೆಯಿರಿ:—

(ಅ) ಇವನ ತಂದೆಯ ಹೆಸರು........... (ವೀರಪ್ಪ, ಪೀರಪ್ಪ, ಬೀರಪ್ಪ)

(ಆ) ಇವನು................ವರುಷದವನಿದ್ದಾಗ ಈತನ ತಂದೆಯು ತೀರಿಕೊಂಡನು. (ಆರು, ಏಳು, ಐದು)

(ಇ) ಈತನಿಗೆ ಕನಕವು...................ಸಲ ಸಿಕ್ಕಿತು. (ಆರು, ಏಳು, ಎಂಟು)

(ಈ) ಕಾಗಿನೆಲೆಯಲ್ಲಿ ಗುಡಿಯನ್ನು ಕಟ್ಟಿಸಿ ಅದರೊಳಗೆ........ ... ........ನ ಮೂರ್ತಿಯನ್ನು ಸ್ಥಾಪಿಸಿದನು. (ಮುದಿಕೇಶವ, ಚೆನ್ನಕೇಶವ, ಆದಿಕೇಶವ)

(ಉ) ಈಗಲೂ ಉಡುಪಿಯಲ್ಲಿ ಶ್ರೀಕೃಷ್ಣನ ಮೂರ್ತಿಯು........... ........ಕ್ಕ ಮುಖ ಮಾಡಿ ನಿಂತಿದೆ. (ಪಶ್ಚಿಮ, ಪೂರ್ವ, ಉತ್ತರ)

೩೧. ಇಕ್ಕೇರಿಯ ದೊಡ್ಡ ಸಂಕಣ್ಣ ನಾಯಕ

ಇಕ್ಕೇರಿಯ ಪಾಳೆಯಗಾರರು ವೀರಶೈವರು. ಇವರಿಗೆ ಕೆಳದಿಯ ಪಾಳೆಯಗಾರರೆಂದೂ ಕರೆಯುತ್ತಾರೆ. ಇವರಲ್ಲಿ ಮೂರನೆಯ ತಲೆಯವನಾದ ದೊಡ್ಡ ಸಂಕಣ್ಣನಾಯಕನು ವಿಶೇಷ ಪ್ರಸಿದ್ಧಿಯನ್ನು ಪಡೆದ ಅರಸು. ಈತನು ಒಳ್ಳೆ ದರ್ಪದಿಂದಲೂ ವೈಭವದಿಂದಲೂ ಆಳಿದನು. ಆಗಿನ ಕಾಲಕ್ಕೆ ಈತನಿಗೆ ಸಮಾನರಾದ ಪರಾಕ್ರಮಿಗಳು ಭರತಖಂಡದಲ್ಲಿಯೇ ಯಾರೂ ಇರಲಿಲ್ಲ. ಯುದ್ಧದ ಕಲೆಗಳಲ್ಲೆಲ್ಲ ನಿಪುಣನಿದ್ದನು. ಕತ್ತಿ ತಿರುಗಿಸುವದರಲ್ಲಿ ಯಂತೂ ಇವನದು ಮೇಲುಗೈ. ಈತನು ಶೂರನಿದ್ದಷ್ಟೇ ದಯಾಳುವೂ, ಧರ್ಮನಿಷ್ಟನೂ, ಪ್ರಜಾವತ್ಸಲನೂ ಆಗಿದ್ದನು. ಈತನ ಕೈಯಿಂದ ಒಂದೂ ಅನ್ಯಾಯದ ಕೃತಿಯು ಆಗಲಿಲ್ಲೆಂದು ಖ್ಯಾತಿ ಇತ್ತು. ಪ್ರಜೆಗಳಂತೂ ಈತನನ್ನು ಹಾಡಿ ಹರಿಸಿದರು. ಹೀಗಿರುವಾಗ, ಒಮ್ಮಿಂದೊಮ್ಮೆಲೇ ಇವನಲ್ಲಿ ತೀರ್ಥ ಯಾತ್ರೆಯನ್ನು ಕೈಕೊಳ್ಳಬೇಕೆಂಬ ಹಂಬಲವು ಹುಟ್ಟಿ, ಅದು ದಿನದಿನಕ್ಕೆ ಬೆಳೆಯಹತ್ತಿತು. ಆದುದರಿಂದ ಪ್ರಜೆಗಳ ಒಪ್ಪಿಗೆಯನ್ನು ಪಡಕೊಂಡು ತನ್ನ ತಮ್ಮನಾದ ಚಿಕ್ಕಸಂಕಣ್ಣನಿಗೆ ರಾಜ್ಯವನ್ನು ಒಪ್ಪಿಸಿ ತೀರ್ಥಯಾತ್ರೆ ಗಾಗಿ ದೇಶ ಸಂಚಾರ ಮಾಡಲು ಹೊರಬಿದ್ದನು. ಸನ್ಯಾಸಿಯಂತೆ ಮೈಮೇಲೆ ಕ್ಯಾವೀ ಬಣ್ಣದ ಶಾಟಿಯನ್ನು ಹೊದ್ದುಕೊಂಡು ತನ್ನ ಸಂಗಡ ಒಬ್ಬ ಜಂಗಮನನ್ನೂ ಕೆಲಜನ ಪರಿವಾರದವರನ್ನೂ ಕರಕೊಂಡು ಹೊರಟನು. ಉತ್ತರ ಭಾರತದಲ್ಲಿ ಸಂಚಾರ ಮಾಡುತ್ತ ಮಾಡುತ್ತ ದಿಲ್ಲೀ ಪಟ್ಟಣವನ್ನು ತಲುಪಿದನು. ಅಲ್ಲಿ ಆಗ ಅಕಬರ ಬಾದಶಹನು ಆಳುತ್ತಿದ್ದನು.

ಆ ಪಟ್ಟಣದಲ್ಲಿಯ ಸುಂದರವಾದ ಕಟ್ಟಡಗಳನ್ನು ನೋಡುತ್ತ ನೋಡುತ್ತ ಅರಮನೆಯ ಹೆಬ್ಬಾಗಿಲದ ಎದುರಿಗೆ ಬಂದನು. ಅಲ್ಲಿ ಒಂದು ಹತ್ಯಾರವನ್ನು ಕಟ್ಟಿದ್ದರು. ಅದರ ಕಾರಣವು ಸಂಕಣ್ಣನಿಗೆ ಹೊಳೆಯಲಿಲ್ಲ. ಅಲ್ಲಿಯೇ ನಿಂತಿದ್ದ ಕಾವಲುಗಾರನನ್ನು ಅದೇನೆಂದು ಕೇಳಿದನು. "ಇಲ್ಲಿ ಅಂಕುಶಖಾನ ನೆಂಬ ಒಬ್ಬ ಪರಾಕ್ರಮಿಯು ಇದ್ದಾನೆ. ತನ್ನ ಕೂಡ ಕಾದಲು ಧೈರ್ಯವಿದ್ದವನು

ಈ ಕತ್ತಿಯನ್ನು ಕಿತ್ತಿ ತೆಗೆಯಬೇಕೆಂದು ಪಣ ತೊಟ್ಟಿದ್ದಾನೆ. ” ಎಂದು ಆ ಕಾವಲುಗಾರನು ನಿಜ ಸಂಗತಿಯನ್ನು 'ಸಂಕಣ್ಣನಿಗೆ ಅರುಹಿದನು. ಸಂಕಣ್ಣನು ಹುಟ್ಟಾ ಪರಾಕ್ರಮಿಯು. ಖಡ್ಗವನ್ನು ತಿರುಗಿಸುವದರಲ್ಲಿಯಂತೂ ಹೆಚ್ಚಿನವನು. ಅಂಕುಶಖಾನನ ದರ್ಪದ ಪಣವನ್ನು ಕೇಳಿ ಈತನ ತಲೆ ತಿರುಗಿತು. ತಾನು ಸನ್ಯಾಸಿಯ ವೇಷದಲ್ಲಿದ್ದವನ್ನು ಮರೆತುಬಿಟ್ಟನು. ನಿಂತ ಕಾಲಮೇಲೆ ತನ್ನಗೂಡ ಇದ್ದ ಪರಿವಾರದವರ ಕಡೆಯಿಂದ ಆ ಕತ್ತಿಯನ್ನು ಕಿತ್ತಿಸಿಬಿಟ್ಟನು. ಕಾವಲುಗಾರನು ಈ ಸಂಗತಿಯನ್ನು ಅಂಕುಶಖಾನನಿಗೆ ತಿಳಿಸಿದನು. ಕೂಡಲೆ ಅಂಕುಶಖಾನನು ರೊಚ್ಚಿಗೆದ್ದು ಅರಮನೆಯ ಹೆಬ್ಬಾಗಿಲಕ್ಕೆ ಬಂದು ಸ್ವತಃ ನೋಡಿದನು. ಕತ್ತಿಯನ್ನು ಕಿತ್ತಿಸಿ ಅಲ್ಲಿಯೇ ನಿಂತಿದ್ದ ಸಂಕಣ್ಣನನ್ನು ತನ್ನಗೂಡ ದ್ವಂದ್ವ ಯುದ್ಧಕ್ಕೆ ಬರಬೇಕೆಂದು ಕರೆದನು. ಅದಕ್ಕೆ ದೊಡ್ಡ ಸಂಕಣ್ಣನು ಸಂತೋಷದಿಂದ ಒಪ್ಪಿಕೊಂಡನು.

ಬಾದಶಹನಿಂದ; ಇದಕ್ಕಾಗಿ ಒಂದು ದಿನವು ನಿಯಮಿಸಲ್ಪಟ್ಟಿತು. ಊರೊಳಗಿನ ಜನರೆಲ್ಲರೂ ಕಿಕ್ಕಿರಿದು ನೆರೆದರು. ಬಾದಶಹನು ಬಂದು ಸಿಂಹಾಸನದ ಮೇಲೆ ಕುಳಿತನು. ಕೂಡಲೆ ಅಂಕುಶಖಾನನೂ ದೊಡ್ಡ ಸಂಕಣ್ಣನಾಯಕನೂ ತಮ್ಮ ತಮ್ಮ ಕತ್ತಿಢಾಲುಗಳನ್ನು ಹಿಡಿದುಕೊಂಡು ರಂಗಸ್ಥಳದ ಮೇಲೆ ಬಂದು ನಿಂತರು. ಇಬ್ಬರಿಗೂ ಕಾದಾಟವು ಪ್ರಾರಂಭವಾಯಿತು. ಅವರೀರ್ವರೂ ಕತ್ತಿಗಳನ್ನು ಹೇಗೆ ತಿರುಗಿಸಿದರೋ ಹೇಗೆ ಹೋರಾಡಿದರೋ ಎಂಬುದು ಅಲ್ಲಿ ನೋಡಲು ನೆರೆದವರಲ್ಲಿ ಒಬ್ಬರ ಕಣ್ಣಿಗೂ ಸಹ ಕಾಣಿಸಲಿಲ್ಲ. ಅಷ್ಟು ವೇಗದಿಂದ ಕತ್ತಿಯನ್ನು ತಿರುಗಿಸುವದೂ ಹೋರಾಡುವದೂ ನಡೆದುಬಿಟ್ಟಿತು. ಹೀಗೆ ರಭಸದಿಂದ ಹೋರಾಡುವಾಗ ಇಬ್ಬರೂ ಗಕ್ಕನೆ ಸುಮ್ಮನೆ ನಿಂತುಬಿಟ್ಟರು. ಇದನ್ನು ನೋಡಿ ಬಾದಶಹನು ಸಂಕಣ್ಣನನ್ನು ಕುರಿತು— “ಸುಮ್ಮನೆ ನಿಂತುಕೊಂಡಿರುವಿಯಲ್ಲ? ಹೀಗೇಕೆ? ಹಾಗಾದರೆ ನಿನ್ನ ಕಡೆಯಿಂದ ಖಾನನಗೂಡ ಯುದ್ಧಮಾಡುವದು ಆಗುವದಿಲ್ಲವೋ? ” ಎಂದು ಜರೆದು ಕೇಳಿದನು. “ ನಾನು ಸತ್ತ ಹೆಣದಗೂಡ ಯುದ್ಧ ಮಾಡುವ ಹೇಡಿಯಲ್ಲ. ” ಎಂದು ಕನ್ನಡ ವೀರನು ಮಾರುನುಡಿದನು. ಹೀಗೆಂದು, ಕಣ್ಣುಬಿಟ್ಟುಕೊಂಡು ನಿಂತಿದ್ದ ಖಾನನ ಮೃತದೇಹಕ್ಕೆ ತನ್ನ ಕತ್ತಿಯ ತುದಿಯಿಂದ ತಿವಿದುಬಿಟ್ಟನು. ಕೂಡಲೆ ಖಾನನ ಮೃತ ದೇಹವು ಎರಡು ತುಂಡಾಗಿ ಬಿದ್ದುಬಿಟ್ಟಿತು ! ಟೊಂಕದ ಮೇಲಿನ ಮೇಲ್ಭಾಗವು, ಟೊಂಕದ ಕೆಳಗಿನ

ಕೆಳಭಾಗವು ಹೀಗೆ ಎರಡು ತುಂಡುಗಳಾಗಿದ್ದವು. ಮತ್ತು ಅವು ಕಳಚಿ ಬೀಳದೆ ಒಂದೇ ದೇಹದಂತೆ ನಿಂತುಬಿಟ್ಟದ್ದವು!! ಇದರ ಮೇಲಿಂದ ಕತ್ತಿ ತಿರುಗಿಸುವದರಲ್ಲಿ ಸಂಕಣ್ಣನು ಸಂಪಾದಿಸಿದ ಕೌಶಲ್ಯವು ಎಂತಹದಿರಬೇಕೆಂಬುದನ್ನು ವರ್ಣಿಸುವದು ಶಕ್ಯವಿಲ್ಲದಾಗಿದೆ. ನೆರೆದವರೆಲ್ಲರೂ ಕನ್ನಡ ವೀರನ ಪರಾಕ್ರಮಕ್ಕೆ ಬೆರಳು ಕಚ್ಚಿ ಆತನನ್ನು ಬಾಯಿತುಂಬ ಕೊಂಡಾಡಿದರು. ಸಂಕಣ್ಣನನ್ನು ಜರೆದು ನುಡಿದ ಬಾದಶಹನಂತೂ ದಂಗುಬಡಿದು ಕುಳಿತುಬಿಟ್ಟನು! ಸಂಕಣ್ಣನ ಪರಾಕ್ರಮಕ್ಕೆ ಮೆಚ್ಚಿ ಹೆಚ್ಚಿನ ಬಹುಮಾನವನ್ನು ಕೊಟ್ಟನು. ಸಂಕಣ್ಣನ ದೇಹರಕ್ಷಣೆಗೆ ದಂಡನ್ನೂ ಹೇರಳಹಣವನ್ನೂ ಕೊಟ್ಟು ಬಾದಶಹನು ಅವನನ್ನು ಕಾಶಿಗೆ ಬೀಳ್ಕೊಟ್ಟನು. ತೀರ್ಥಯಾತ್ರೆ ಮುಗಿಸಿಕೊಂಡು ತನ್ನೂರಿಗೆ ಹೋಗಿ ಸುಖದಿಂದ ರಾಜ್ಯವಾಳಿ ಲಿಂಗೈಕ್ಯನಾದನು.

## ಅಭ್ಯಸನಗಳು

೧. ದಿಲ್ಲಿಯ ಅರಮನೆಯ ಹೆಬ್ಬಾಗಿಲದಲ್ಲಿ ಕತ್ತಿಯನ್ನು ಯಾರು ಕಟ್ಟಿ ಇಟ್ಟದ್ದರು? ಅದನ್ನು ಯಾರು ಕಿತ್ತಿ ತೆಗೆದರು? ಏಕೆ ಕಿತ್ತಿ ತೆಗೆದರು?

೨. ಅಂಕುಶಖಾನ ಮತ್ತು ಸಂಕಣ್ಣನಾಯಕನ ನಡುವೆ ಆದ ದ್ವಂದ್ವ ಯುದ್ಧವನ್ನು ವರ್ಣಿಸಿರಿ.

೩. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.:–

(ಅ) ಇಕ್ಕೇರಿಯ ಪಾಳೆಯಗಾರರಿಗೆ...... ....ಯ ಪಾಳೆಯಗಾರರೆಂದೂ ಕರೆಯುತ್ತಾರೆ.

(ಆ) ಇವರಲ್ಲಿ.......... ನೆಯ ತಲೆಯವನಾದ..................ನು ವಿಶೇಷ ಪ್ರಸಿದ್ಧಿಯನ್ನು ಪಡೆದ ಅರಸು.

(ಇ) ........ತಿರುಗಿಸುವದರಲ್ಲಿ ಇವನದು ........ಗೈ.

(ಈ) ಒಮ್ಮಿಂದೊಮ್ಮೆಲೆ ಇವನಲ್ಲಿ..... ....... ....ಯನ್ನು ಕೈಕೊಳ್ಳಬೇಕೆಂಬ............ವು ಹುಟ್ಟಿತು.

(ಉ) ............ಯಂತೆ ಮೈಮೇಲೆ ............ ಬಣ್ಣದ ............ಯನ್ನು ಹೊದ್ದುಕೊಂಡು ತನ್ನಗೂಡ ಒಬ್ಬ................ನನ್ನೂ ಕೆಲ ಜನ ............ದವರನ್ನೂ ಕರಕೊಂಡು ಹೊರಟನು.

# ೩೨. ಬೆಳವಡಿ ಮಲ್ಲಮ್ಮ

ಈಗಿನ ಬೆಳಗಾವಿ ಜಿಲ್ಲೆಯಲ್ಲಿ ಬೆಳವಡಿ ಎಂಬ ಗ್ರಾಮವಿದೆ. ಅದು ಒಂದಾನೊಂದು ಕಾಲದಲ್ಲಿ ಒಂದು ದೊಡ್ಡ ದೇಸಗತಿಯ ರಾಜಧಾನಿಯಿತ್ತು. ಈಶಪ್ರಭು ಎಂಬವನು ಅದರ ದೇಸಾಯಿ ಇದ್ದನು. ಈತನು ವೀರಶೈವನು. ಈತನ ಹೆಂಡತಿಯೇ ಮಲ್ಲವ್ವ ದೇಸಾಯಿಣಿಯು. ಇವರೀರ್ವರು ಧರ್ಮ ನಿಷ್ಠರೂ, ಶೂರರೂ, ಚತುರರೂ, ಪ್ರಜೆಗಳ ಮೆಚ್ಚುಗೆಗೆ ಪಾತ್ರರಾದವರೂ ಆಗಿದ್ದರು. ಕುದುರೆ ಹತ್ತುವದು ಮತ್ತು ಖಡ್ಗವನ್ನು ತಿರುಗಿಸುವದು ಅವ ಳಿಗೆ ಬಹಳಷ್ಟು ಸೇರುತ್ತಿದ್ದವು. ಗಂಡುಗಚ್ಚಿ ಹಾಕಿ ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಕುದುರೆಯನ್ನೇರಿ ವೀರಾವೇಶದಿಂದ ಹೊರಟಳೆಂದರೆ ರಣ ಚಂಡಿಯಂತೆ ಕಾಣಿಸುತ್ತಿದ್ದಳು.

ಈ ಕಾಲಕ್ಕೆ ಶಿವಾಜಿಯು ಕರ್ನಾಟಕದ ದಿಗ್ವಿಜಯಕ್ಕಾಗಿ ಹೊರಟಿದ್ದನು. ಅವನು ಮುಳಗುಂದ, ಶಿರಹಟ್ಟಿ, ಗದಗ, ಹುಬ್ಬಳ್ಳಿಗಳ ಮೇಲಿಂದ ಹಾಯ್ದು ಬೆಳವಡಿಯ ಹತ್ತಿರ ಕ್ರಿ. ಶ. ೧೬೭೮ರಲ್ಲಿ ಬಂದನು. ಅವನ ದಂಡಿನವರು ಬೆಳವಡಿಯ ಊರೊಳಗೆ ಮತ್ತು ನೆರೆಯ ಊರೊಳಗೆ ಹೊಕ್ಕು ಹಾವಳಿ ನಡೆಸಿದರು. ಇದನ್ನು ನೋಡಿ ಈಶಪ್ರಭುವಿನ ಕಡೆಯವರು ಶಿವಾಜಿಯ ದಂಡಿನ ಕೆಲವರನ್ನು ಕೊಂದುಹಾಕಿದರು. ಇದನ್ನು ಕೇಳಿದ ಕೂಡಲೆ ಶಿವಾಜಿಯು ಬೆಳವಡಿ ಕೋಟೆಗೆ ಮುತ್ತಿಗೆ ಹಾಕಲು ಅಜ್ಞೆ ಕೊಟ್ಟನು. ಈಶಪ್ರಭುವು ಒಳಗೆ ಇದ್ದುಕೊಂಡು ಸಿದ್ಧತೆಯನ್ನು ಚೆನ್ನಾಗಿ ಮಾಡಿಕೊಂಡು ಶಿವಾಜಿಯೊಡನೆ ಯುದ್ಧ ಹೂಡಿದನು. ಹೀಗೆ ಯುದ್ಧ ನಡೆದಾಗ ಶಿವಾಜಿಯ ದಂಡಿನವರು ಕಪಟತನದಿಂದ ಕೋಟೆಯಲ್ಲಿಯ ಮನೆಗಳಿಗೆ ಬೆಂಕಿ ಹಚ್ಚಿದರು. ಈ ಗದ್ದಲದಲ್ಲಿ ಶಿವಾಜಿಯ ಕಡೆಯವರು ಕೋಟೆಯನ್ನೇರಿ ಒಳ ಹೊಕ್ಕರು. ಈಶಪ್ರಭುವು ಸ್ವತಃ ಕುದುರೆಯನ್ನೇರಿ ಯುದ್ಧಕ್ಕೆ ನಿಂತನು. ಕೈಗೆ ಕೈ ಹತ್ತಿತು. ಈ ಗದ್ದಲದೊಳಗೆ ಈಶಪ್ರಭುವು ಮಡಿದು ವೀರಸ್ವರ್ಗವನ್ನು ಪಡೆದನು. ತಮ್ಮ ದೊರೆಯು ಮಡಿದುದರಿಂದ ಈತನ ದಂಡಿನವರು ಓಡಹತ್ತಿದ್ದನ್ನು ಕಂಡು ಮಲ್ಲವ್ವ ದೇಸಾಯಿಣಿಗೆ ವೀರಾವೇಶ ಬಂದುಬಿಟ್ಟಿತು. ತನ್ನ ಗಂಡ ಸತ್ತ ದುಃಖವನ್ನು ಹೇಗೋ ನುಂಗಿಕೊಂಡು ಗಂಡು

ಗಚ್ಚಿ ಹಾಕಿ, ಗಂಡನ ಕುದುರೆ ಹತ್ತಿ, ಅವನ ಕತ್ತಿಯನ್ನೇ ಹಿಡಕೊಂಡು ಓಡುತ್ತಿರುವ ತನ್ನ ದಂಡಾಳುಗಳಿಗೆ ಹುರಿದುಂಬಿಸಿದಳು. ದೇಸಾಯಿಣಿಯು ಹೊಡೆತಕ್ಕೆ ಶಿವಾಜಿಯ ದಂಡಿನವರು ಬೆದರಿದರು. ವೈರಿಗಳನ್ನೆಲ್ಲ ಕೋಟೆಯ ಹೊರಗೆ ಅಟ್ಟಿ, ಬಾಗಿಲು ಮುಚ್ಚಿಸಿದಳು.



ಶಿವಾಜಿಯು ಬೆಳವಡಿ ಮಲ್ಲಮ್ಮನನ್ನು ಗೌರವದಿಂದ ಕಂಡದ್ದು

ತನ್ನ ಸೈನಿಕರು ಹೆಣ್ಣುಮಗಳಿಂದ ಸೋತು ಬಂದ ಸುದ್ದೀ ಕೇಳಿ, ಶಿವಾಜಿಗೆ ಸಂತಾಪವಾಯಿತು; ಮತ್ತೆ ಮುತ್ತಿಗೆಯನ್ನು ಹಾಗೇ ನಡೆಸಿದನು. ಮಲ್ಲವ್ವ ದೇಸಾಯಿಣಿಯು ತನ್ನ ಸೈನ್ಯವನ್ನು ಕರಕೊಂಡು ವೈರಿಗಳನ್ನು ಸದೆ ಬಡಿಯಲಿಕ್ಕೆ ಹೊರಬಿದ್ದಳು. ಎಷ್ಟೋ ವೈರಿಗಳನ್ನು ಕೊಂದು ಹಾಕಿದಳು. ಕೆಲ ಹೊತ್ತಿನ ಮೇಲೆ ವೈರಿಗಳ ಕಡೆಯವನೊಬ್ಬನು ಮೋಸದಿಂದ ಮಲ್ಲವ್ವನ ಕುದುರೆಯ ಕಾಲನ್ನು ಕಡಿದು ಹಾಕಿದನು. ಆಗ ಕುದುರೆಯಿಂದಿಳಿದು ಕೈಗೆ ಕೈ ಯುದ್ಧ ನಡೆಸಿದಳು. ಈ ಗೊಂದಲದಲ್ಲಿ ದೇಸಾಯಿಣಿಯ ಕೈಗೆ ಗಾಯವಾಗಿ ಎಚ್ಚರದಪ್ಪಿ ಬಿದ್ದಳು. ಶಿವಾಜಿಯ ಸೈನಿಕರಿಗೆ ದೇಸಾಯಿಣಿಯ ಶೌರ್ಯವನ್ನು ನೋಡಿ ಆನಂದವಾಯಿತು. ಅವರು ದೇಸಾಯಿಣಿ

# ೩೩. ಕೆಳದಿಯ ವೀರ ಚೆನ್ನಮ್ಮಾಜಿಯು

ಕೆಳದಿಯು ಮೈಸೂರ ಸಂಸ್ಥಾನದಲ್ಲಿದೆ. ಅಲ್ಲಿಯ ಅರಸರೆಷ್ಟೋ ಮಂದಿ ಹೆಸರಾಗಿದ್ದಾರೆ. ಅವರೆಲ್ಲರೂ ವೀರಶೈವರು. ಆ ವಂಶದಲ್ಲಿ ಒಬ್ಬ ವೀರ-ರಮಣಿಯಾಗಿ ಹೋಗಿದ್ದಾಳೆ. ಅವಳ ಹೆಸರು ಚೆನ್ನಮ್ಮಾಜಿಯು. ಇವಳು ಸೋಮಶೇಖರನಾಯಕನ ಹೆಂಡತಿಯು. ವೈರಿಗಳು ಇವಳ ಗಂಡನನ್ನು ಕಪಟತನದಿಂದ ಕೊಲ್ಲಿಸಿದರು. ಮುಂದೆ ಇವಳೇ ಪಟ್ಟಕ್ಕೆ ಬಾಧ್ಯಸ್ಥಳಾದಳು. ಇವಳ ಪಟ್ಟಾಭಿಷೇಕವು ಕ್ರಿ. ಶ. ೧೬೭೨ರಲ್ಲಿ ಒಳ್ಳೆ ಸಡಗರದಿಂದಲೂ ವೈಭವದಿಂದಲೂ ಆಯಿತು. ಪಟ್ಟಕ್ಕೆ ಬಂದೊಡನೆ ರಾಜ್ಯದಲ್ಲಿಯ ಪುಂಡರನ್ನೂ



ಅರಮನೆಯ ಒಳಮಾಳಿಗೆಯಲ್ಲಿ ಗಂಡಬೇರುಂಡದ ಪಕ್ಷಿ

ಮನೆಮುರುಕರನ್ನೂ ಬಗ್ಗುಬಡಿದು ಸುಲಿಗೆಗಾರರ ಹುಟ್ಟನ್ನು ಅಡಗಿಸಿದಳು. ಕೆಲವೇ ದಿನಗಳಲ್ಲಿ ಶಾಂತತೆಯು ಎಲ್ಲ ಕಡೆಗೆ ನೆಲೆಗೊಂಡು, ಅವಳ ರಾಜ್ಯವು ವೈಭವದಿಂದಲೂ ಸಂಪತ್ತಿನಿಂದಲೂ ಮೆರೆಯಹತ್ತಿತು.

ಸ್ವಾದಿ ಪ್ರಾಂತದ ಅರಸನಾದ ರಾಮಚಂದ್ರನು ೬೦ ಸಾವಿರ ಕಾಲಾಳು ಗಳು ಮತ್ತು ೨೦ ಸಾವಿರ ರಾಹುತರಿದ್ದ ದೊಡ್ಡದೊಂದು ಸೈನ್ಯವನ್ನು ತಕ್ಕೊಂಡು ಕ್ರಿ. ಶ. ೧೬೭೯ ರಲ್ಲಿ ಚೆನ್ನಮ್ಮಾಜಿಯ ರಾಜ್ಯದಲ್ಲಿ ನುಗ್ಗಿದನು. ಇಬ್ಬರ ನಡುವೆ ಮೂರು ತಿಂಗಳುಗಳವರೆಗೆ ಘನಘೋರ ಯುದ್ಧವಾಯಿತು. ಕೊನೆಯಲ್ಲಿ ಜಯಲಕ್ಷ್ಮಿಯು ಚೆನ್ನಮ್ಮಾಜಿಯ ಕೊರಳಲ್ಲಿ ಮಾಲೆಯನ್ನು ಹಾಕಿದಳು. ರಾಮಚಂದ್ರರಾಜನ ಪ್ರಾಂತಗಳಾದ ಶಿರಸಿ, ಬನವಾಸಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಅಲ್ಲಿಯೂ ಶಾಂತತೆಯನ್ನು ನೆಲೆಗೊಳಿ ಸಿದಳು.

ಆಗ ಮೈಸೂರಲ್ಲಿ ಚಿಕ್ಕದೇವರಾಯನು ಆಳುತ್ತಿದ್ದನು. ಅವನ ದಂಡ ನಾಯಕನಾದ ತಿಮ್ಮಣ್ಣನು ದೊಡ್ಡದೊಂದು ದಂಡನ್ನು ತಕ್ಕೊಂಡು ಕ್ರಿ. ಶ. ೧೬೮೬ ರಲ್ಲಿ ಚೆನ್ನಮ್ಮಾಜಿಯ ಮೇಲೇರಿ ಬಂದನು. ಅವನನ್ನು ಸೋಲಿಸಿ ಅವನನ್ನೂ ಅವನ ಮಗನನ್ನೂ ಭುವನದುರ್ಗವೆಂಬಲ್ಲಿ ಸೆರೆಯಲ್ಲಿಟ್ಟಳು. ಚಿಕ್ಕ ದೇವರಾಯನು ತನ್ನವೆರಡು ಪ್ರಾಂತಗಳನ್ನು ರಾಣಿಗೆ ಕೊಟ್ಟು ಅವರಿಬ್ಬರನ್ನೂ ಬಿಡಿಸಿಕೊಂಡು ಹೋದನು.

ಇದೇ ಸಮಯಕ್ಕೆ ಶಿವಾಜಿಯ ಎರಡನೆಯ ಮಗನಾದ ರಾಜಾರಾಮನು ಔರಂಗಜೇಬನಿಗೆ ಅಂಜಿ ತನ್ನವರನ್ನೆಲ್ಲ ಕಟ್ಟಿಕೊಂಡು ಜಿಂಜೀಗೆ ನಡೆದನು. ದಾರಿಯಲ್ಲಿ ಕೆಳದಿಯು ಹತ್ತಿತು. ವೀರಚೆನ್ನಮ್ಮಾಜಿಯ ಹೆಸರನ್ನು ಕೇಳಿ ಅವಳ ಮೊರೆಹೊಕ್ಕನು. ಈ ಸುದ್ದಿಯು ಬಾದಶಹನಿಗೆ ಹತ್ತಿತು. ಅವನು ಸಿಟ್ಟಿಗೆದ್ದು "ಒಳ್ಳೆಯ ಮಾತಿನಿಂದ ರಾಜಾರಾಮನನ್ನು ಬಿಟ್ಟು ಕೊಡು. ಇಲ್ಲವಾದರೆ ನೋಡ ನೋಡುವಷ್ಟರಲ್ಲಿ ನಿನ್ನ ರಾಜ್ಯವನ್ನು ನುಂಗಿ ನೀರು ಕುಡಿಯುತ್ತೇವೆ" ಎಂಬದೊಂದು ಬೆದರಿಕೆಯ ಪತ್ರವನ್ನು ಬರೆದು ಕಳುಹಿಸಿ ದನು. ವೀರ ರಾಣಿಯು ಇಂತಹ ಬೆದರಿಕೆಗೆ ಸೊಪ್ಪು ಹಾಕುವವಳೇ? "ಬೆನ್ನಿಗೆ ಬಿದ್ದವರನ್ನು ಕಾಪಾಡುವದು ನನ್ನ ಧರ್ಮ. ಬಂದದ್ದು ಬರಲಿ; ನಾನ ದನ್ನು ಎದುರಿಸಲು ಸಿದ್ಧಳಿದ್ದೇನೆ, ಮೊರೆಹೊಕ್ಕ ಅರಸುಮಗನನ್ನು ನಾನೆಂ ದಿಗೂ ಕೊಡಲಾರೆ." ಎಂದು ಗಟ್ಟಿಮುಟ್ಟಾದ ಉತ್ತರವನ್ನು ಬರೆದು ಕಳುಹಿದಳು. ಈ ಉತ್ತರವನ್ನು ಓದಿದೊಡನೆ ಬಾದಶಹನ ಕಣ್ಣುಗಳು ಕೆಂಪಾ ದವು. ಕೂಡಲೆ ತನ್ನ ಸೇನಾಪತಿಗೆ ಕೆಳದಿಯ ರಾಜ್ಯವನ್ನು ಹಾಳು ಮಾಡಲು

ಅಪ್ಪಣೆ ಕೊಟ್ಟನು. ಮೊಗಲರ ಸೇನಾಪತಿಯು ದೊಡ್ಡ ದಂಡಿನೊಡನೆ ಬಂದು ಕೆಳದಿಯ ಹತ್ತಿರ ಪಾಳಯವನ್ನು ಹಾಕಿದನು. ಇಬ್ಬರ ನಡುವೆ ಬಹಳ ದಿನಗಳ ವರೆಗೆ ಕಾಳಗವು ನಡೆಯಿತು. ಈ ಯುದ್ಧದಲ್ಲಿ ವೀರ ಕನ್ನಡ ರಾಣಿಯು ಬಹಳಷ್ಟು ರಣಕೌಶಲ್ಯವನ್ನು ತೋರಿಸಿದಳು. ಮೊಗಲರ ಸೇನಾ ಪತಿಯು ಸೋತು ಒಪ್ಪಂದ ಮಾಡಿಕೊಂಡು ದಿಲ್ಲಿಗೆ ಹಿಂದಿರುಗಿದನು. ಚೆನ್ನಮ್ಮಾಜಿಯ ಕೀರ್ತಿಯು ದಿಲ್ಲಿಯ ವರೆಗೆ ಹಬ್ಬಿತು.

ಬುದ್ಧಿವಂತಿಕೆಯಲ್ಲಿ ಮಿಗಿಲಾಗಿದ್ದಳಲ್ಲದೆ, ರಾಜಕಾರಣದಲ್ಲಿ ಹೆಸರಾಗಿದ್ದಳು. ದಾನಧರ್ಮ ಮಾಡುವದರಲ್ಲಿ ಜಾತಿಭೇದವನ್ನು ಎಂದೂ ಮಾಡಲಿಲ್ಲ. ಎಲ್ಲ ಜಾತಿಗಳ ದೇವಸ್ಥಾನಗಳಿಗೆ ಉಂಬಳಿಗಳನ್ನು ಹಾಕಿ ಕೊಟ್ಟಳು. ಶೂರಳಿದ್ದಷ್ಟೇ ಧರ್ಮಿಷ್ಟಳಿದ್ದಳು. ಶಿವಕ್ಷೇತ್ರ, ಗೋಕರ್ಣ, ತಿರುಪತಿ, ಶ್ರೀಶೈಲ, ರಾಮೇಶ್ವರ, ಕಾಶಿ ಮೊದಲಾದ ಕ್ಷೇತ್ರಗಳಿಗೆ ಹೋಗಿ ಬಂದಳು. ಎಲ್ಲರನ್ನು ಸಮತೆಯಿಂದಲೂ ನ್ಯಾಯದಿಂದಲೂ ಆಳಿ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದಳು. ಜನಮೆಚ್ಚುವಂತೆ ಸುಮಾರು ಇಪ್ಪತ್ತೇಳು ವರುಷಗಳ ವರೆಗೆ ರಾಜ್ಯವಾಳಿ ಲಿಂಗೈಕ್ಯಳಾದಳು.

## ಅಭ್ಯಸನಗಳು

೧. ಔರಂಗಜೇಬನು ಚೆನ್ನಮ್ಮಾಜಿಗೆ ಬರೆದ ಪತ್ರವನ್ನೂ ಚೆನ್ನಮ್ಮಾಜಿಯ ಉತ್ತರವನ್ನೂ ಬರೆಯಿರಿ.

೨. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ:—

(ಅ) ಇವಳು............ನಾಯಕನ ಹೆಂಡತಿಯು.

(ಆ) ಪಟ್ಟಾಭಿಷೇಕವು ಕ್ರಿ. ಶ. ..... .. ರಲ್ಲಿ ಆಯಿತು.

(ಇ) ಪಟ್ಟಕ್ಕೆ ಬಂದೊಡನೆ ರಾಜ್ಯದೊಳಗಿನ........ರನ್ನೂ............ರನ್ನೂ ಬಗ್ಗುಬಡಿದು .......ರ ಹುಟ್ಟನ್ನು ಅಡಗಿಸಿದಳು.

(ಈ) ಸ್ವಾದಿ ಪ್ರಾಂತದ ಅರಸನಾದ... ........ನು ........ಸಾವಿರ ಕಾಲಾಳುಗಳು .......ಸಾವಿರ ರಾಹುತರಿದ್ದ ದೊಡ್ಡದೊಂದು............ವನ್ನು ತಕ್ಕೊಂಡು ಕ್ರಿ. ಶ ... ....ರಲ್ಲಿ ........ಯ ರಾಜ್ಯದಲ್ಲಿ ನುಗ್ಗಿದನು.

(ಉ) … ……ರಾಯನ ದಂಡನಾಯಕನಾದ…………ನು ದೊಡ್ಡ ದೊಂದು……..ವನ್ನು ತಕ್ಕೊಂಡು…………ಯ ಮೇಲೇರಿ ಬಂದನು.

(ಊ) … ….ಯ … ನೆಯ ಮಗನಾದ ……. .ನು …. .. ..ಯ ಮೊರೆಹೊಕ್ಕನು.

(ಎ) ……..ವರುಷಗಳ ವರೆಗೆ ರಾಜ್ಯವಾಳಿ ಕ್ರಿ. ಶ. …………ರಲ್ಲಿ ಲಿಂಗೈಕ್ಯಳಾದಳು.

# ೩೪. ಹಾಗಲವಾಡಿಯ ರಾಜರ್ಷಿ

## [ ಇಮ್ಮಡಿ ಮುದಿಯಪ್ಪ ನಾಯಕ ]

ಹಾಗಲವಾಡಿಯು ಈಗಿನ ಮೈಸೂರು ಸಂಸ್ಥಾನದ ಗುಬ್ಬಿ ತಾಲೂಕಿನಲ್ಲಿದೆ. ಇಲ್ಲಿಯ ಪಾಳೆಯಗಾರರು ವೀರಶೈವರು. ಇವರಿಗೆ ತಮ್ಮ ಮತದ ಅಭಿಮಾನವಿದ್ದಿತಾದರೂ ಬೇರೆ ಮತಗಳನ್ನು ಯಾವ ಅರಸನೂ ದ್ವೇಷಿಸಲಿಲ್ಲ. ಎಲ್ಲ ಮತದವರನ್ನು ಸಮನಾಗಿ ನೋಡುವದರಲ್ಲಿ ಒಳ್ಳೆ ಹೆಸರಾಗಿದ್ದರು. ಈ ವಂಶದಲ್ಲಿ ಒಟ್ಟಿಗೆ ಹದಿಮೂರು ಮಂದಿ ಅರಸರಾದರು; ಮತ್ತು ಮೂರು ನೂರು ವರುಷಗಳ ವರೆಗೆ ರಾಜ್ಯಭಾರ ಮಾಡಿದರು. ಇವರಲ್ಲಿ ಒಂಬತ್ತನೆಯ ಅರಸನಾದ ಇಮ್ಮಡಿ ಮುದಿಯಪ್ಪ ನಾಯಕನು ಈ ವಂಶಕ್ಕೆ ಸೂರ್ಯನಂತಿದ್ದನು. ಈತನ!ತಂದೆಯ ಹೆಸರು ಚೆನ್ನಬಸವಪ್ಪನಾಯಕ. ಚೆನ್ನಬಸವಪ್ಪ ನಾಯಕನು ತನ್ನ ಮಗನ ವಿದ್ಯಾಭ್ಯಾಸಕ್ಕಾಗಿ ಯೋಗ್ಯ ಗುರುಗಳನ್ನು ನಿಯಮಿಸಿದ್ದನು. ಹುಡುಗನಿದ್ದಾಗಲೇ ಈತನು ಶಾಸ್ತ್ರಗಳಲ್ಲೆಲ್ಲ ನಿಪುಣನಾಗಿ ಘನ ವಿದ್ವಾಂಸನಾದನು. ಈತನಿಗೆ ಕಲಿಸಿದ ಗುರುಗಳು ಈತನ ಚುರುಕು ಬುದ್ಧಿಗೂ ಪಾಂಡಿತ್ಯಕ್ಕೂ ಬೆರಗಾದರು. ಚಿಕ್ಕ ವಯಸ್ಸಿನಲ್ಲಿಯೇ ಕೆಲ ಗ್ರಂಥಗಳನ್ನು ಬರೆದನು. ಈತನು ಪಾಪಭೀರುವು. ಚಿಕ್ಕಂದಿನಿಂದಲೂ ಯುದ್ಧ ಮುಂತಾದ ಹಿಂಸೆಯ ಕೃತಿಗಳು ಈತನಿಗೆ ಸೇರುತ್ತಿರಲಿಲ್ಲ.

ತಂದೆಯು ಲಿಂಗೈಕ್ಯನಾದ ಮೇಲೆ ಈತನಿಗೆ ಕ್ರಿ. ಶ. ೧೭೨೦ ರಲ್ಲಿ ಪಟ್ಟವಾಯಿತು. ಈತನ ಆಳಿಕೆಯಲ್ಲಿ ಯುದ್ಧಗಳೇ ಆಗಲಿಲ್ಲ. ಪ್ರಜೆಗಳೆಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿ ಹೇಳಿದಂತೆ ಆಚರಿಸಿ, ನೀತಿ ಮಾರ್ಗವನ್ನು ಬಿಟ್ಟು ಎಳ್ಳು ಕಾಳಷ್ಟು ಸಹ ಅತ್ತಿತ್ತ ಕದಲದಂತೆ ನಡೆಯಬೇಕೆಂಬುದೇ ಈತನ ಉದ್ದೇಶವಿತ್ತು. ತಾನೂ ಅದರಂತೆ ಆಚರಿಸಿ ತೋರಿಸುತ್ತಿದ್ದನು. ನುಡಿಯಂತೆ ನಡೆ ಇತ್ತಾದುದರಿಂದ ಜನತೆಯ ಭಕ್ತಿ-ವಿಶ್ವಾಸಗಳನ್ನು ಸಂಪಾದಿಸಿದ್ದನು. ಪಂಡಿತರ ಮೇಲೆ ಇವನ ಪ್ರೇಮ ಬಹಳ. ತನ್ನ ಓಲಗಕ್ಕೆ ಬಂದ ಎಲ್ಲ ಮತಗಳ ವಿದ್ವಾಂಸರಿಗೆ ಉಂಬಳಿ ಗ್ರಾಮಗಳನ್ನು ಕೊಟ್ಟಿದ್ದನು. ಈತನ ಒಲವು ವೇಧಾಂತ ವಿಷಯಗಳ ಕಡೆಗೆ ವಿಶೇಷವಾಗಿತ್ತು. ಕಾಶಿಯಿಂದ ಮುದ್ದುವೀರ ಸ್ವಾಮಿಗಳೆಂಬ ಜಂಗಮ ಶ್ರೇಷ್ಠರನ್ನು ಕರೆಯಿಸಿಕೊಂಡು ಅವರಿಂದ ಮಂತ್ರೋಪದೇಶವನ್ನು ಹೊಂದಿದನು. ವೇದಾಂತ ವಿಷಯಗಳ ಬಗೆಗೆ ತನ್ನ ಜೀವಮಾನದಲ್ಲಿ ಏಳು ನೂರು ತತ್ವ ಗ್ರಂಥಗಳನ್ನು ಬರೆದನು. ತಾನು ಬರೆದ ತತ್ವಗಳಂತೆ ತನ್ನ ಪ್ರಜೆಗಳು ಆಚರಿಸಿ ತನ್ನಂತೆ ಅವರೂ ಮೋಕ್ಷಸುಖವನ್ನು ಹೊಂದಬೇಕೆಂದು ಈತನ ಹೆಬ್ಬಯಕೆ ಇತ್ತು. ಆದುದರಿಂದ ಪ್ರಜಗಳಿಗೆ ತನ್ನ ತತ್ವಗಳನ್ನು ತಿಳಿಸಿ ಹೇಳಲು ರಾಜ್ಯದಲ್ಲೆಲ್ಲ ಸಂಚಾರ ಮಾಡುವಂಥ ಉಪದೇಶಕರನ್ನು ನಿಯಮಿಸಿದ್ದನು. ಎಷ್ಟೋ ಸಂಗೀತಗಾರರನ್ನು ತನ್ನ ಊಳಿಗದಲ್ಲಿಟ್ಟುಕೊಂಡು ತನ್ನ ರಾಜ್ಯದಲ್ಲಿ ಸಂಗೀತವಿದ್ಯೆಯನ್ನು ಹೆಚ್ಚಿಸಿದನು. ಹಾದಿಕಾರರಿಗೆ ಬಿಸಿಲಿನ ತಾಪವಾಗಬಾರದೆಂದು ಮಾರ್ಗಗಳಗುಂಟ ಗಿಡಗಳನ್ನು ಬೆಳೆಯಿಸಿ ಅಲ್ಲಲ್ಲಿ ಕೆರೆಬಾವಿಗಳನ್ನು ಕಟ್ಟಿಸಿದನು. ಬಂದೀಖಾನೆಯೊಳಗಿನ ಪ್ರತಿಯೊಬ್ಬ ಕೈದಿಗೆ ದಿನಾಲು ಎಮ್ಮೆಯ ಮೊಸರು, ಧಮ್ಮಕ್ಕಿಯ ಅನ್ನ ಸಿಗುವಂತೆಯೂ, ಹಾಸಿಗೊಳ್ಳಲೊಂದು ಹೊತ್ತುಗೊಳ್ಳಲೊಂದು ಹೀಗೆ ಎರಡು ಕಂಬಳಿಗಳನ್ನು ಕೊಡುವಂತೆಯೂ ಕಟ್ಟಳೆ ಮಾಡಿದ್ದನು. ಶಿಕ್ಷೆಯ ಅವಧಿಯು ಮುಗಿದ ಮೇಲೆ ಮಂತ್ರಿಗಳು ಪ್ರತಿಯೊಬ್ಬ ಕೈದಿಯನ್ನು ಕರೆಯಿಸಿ ಅಪರಾಧವನ್ನು ಮಾಡುವದು ದೊಡ್ಡ ಪಾಪವೆಂದು ಅವನ ಮನಸಿನ ಮೇಲೆ ಬಿಂಬಿಸಿ ಚೆನ್ನಾಗಿ ಬುದ್ಧೀ ಹೇಳಿ ಬಿಡುಗಡೆ ಮಾಡಬೇಕೆಂದು ಕಟ್ಟಪ್ಪಣೆ ಮಾಡಿದ್ದನು.

ಒಟ್ಟಿನಮೇಲೆ, ಅಜ್ಞಾನಿಗಳನ್ನು ಸುಜ್ಞಾನಿಗಳನ್ನಾಗಿಯೂ, ಅಬಲರನ್ನು ಸಬಲರನ್ನಾಗಿಯೂ, ಬಡವರನ್ನು ಬಲ್ಲಿದರನ್ನಾಗಿಯೂ ಮಾಡಿ ಪ್ರಜೆಗಳನ್ನು ಸಮದೃಷ್ಟಿಯಿಂದ ನೋಡಿ ರಾಜ್ಯಭಾರವನ್ನು ಮಾಡಿದನು. ಇಂತಹ ಅರಸು ನಿಜವಾಗಿ ಪ್ರಜೆಗಳ ತಾಯ್ತಂದೆ. ಈತನ ರಾಜ್ಯವು ರಾಮರಾಜ್ಯದಂತಿತ್ತು. ಕೆಲವು ಯೋಗಿಗಳ ಸಹವಾಸದಲ್ಲಿದ್ದುಕೊಂಡು ತಪಸ್ಸು ಮಾಡಿದನು. ತಪಸ್ಸು ಮುಗಿದ ಮೇಲೆ ಅವನಿಗೆ ವೈರಾಗ್ಯವು ಪ್ರಾಪ್ತವಾಯಿತು. ಕ್ರಿ. ಶ. ೧೭೪೦ ರಲ್ಲಿ ತನ್ನ ಹಿರಿ ಮಗನಿಗೆ ರಾಜ್ಯಭಾರವನ್ನೆಲ್ಲ ಒಪ್ಪಿಸಿ ಸನ್ಯಾಸಿಯಾಗಿ ಹೋದಲ್ಲೆಲ್ಲ ಜನರಿಗೆ ನೀತಿಮಾರ್ಗವನ್ನು ತೋರಿಸುತ್ತ ದೇಶಸಂಚಾರವನ್ನು ಕೈಕೊಂಡನು. ಈ ರಾಜರ್ಷಿಯು ಹರಿಶ್ಚಂದ್ರ, ನಳ, ರಾಮ, ಧರ್ಮರಾಜ ಮೊದಲಾದವರ ಮಾಲಿಕೆಯಲ್ಲಿರಲು ನಿಜವಾಗಿ ಯೋಗ್ಯನು.

## ಅಭ್ಯಸನಗಳು

೧. ಇಮ್ಮಡಿ ಮುದಿಯಪ್ಪನಾಯಕನು ತನ್ನ ಆಳಿಕೆಯಲ್ಲಿ ಮಾಡಿದ ಸುಧಾರಣೆಗಳಾವವು ?

೨. ಈತನಿಗೆ ರಾಜರ್ಷಿಯೆಂದು ಏಕೆ ಕರೆಯಬೇಕು ?

೩. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸಿನಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದೊಂದನ್ನು ಆಯ್ದುಕೊಂಡು ವಾಕ್ಯವನ್ನು ಪೂರ್ಣ ಮಾಡಿ ಬರೆಯಿರಿ.

(ಅ) ಈತನ ತಂದೆಯ ಹೆಸರು.......ನಾಯಕ. (ಗುರುಬಸವಪ್ಪ, ವೀರಬಸವಪ್ಪ, ಚೆನ್ನಬಸವಪ್ಪ)

(ಆ) ಈತನು ಈ ವಂಶದಲ್ಲಿ...........ಅರಸು. (ಒಂಬತ್ತನೆಯ, ಹನ್ನೊಂದನೆಯ, ಎಂಟನೆಯ)

(ಇ) ಹಾಗಲವಾಡಿಯು ಮೈಸೂರ ಸಂಸ್ಥಾನದ...........ತಾಲೂಕಿನಲ್ಲಿದೆ. (ಕಡೂರು, ಗುಬ್ಬಿ, ಶಿವಮೊಗ್ಗೆ)

(ಈ) ಈತನು ತನ್ನ ಜೀವಮಾನದಲ್ಲಿ... ........ತತ್ವ ಗ್ರಂಥಗಳನ್ನು ಬರೆದನು. (ಏಳನೂರು, ಆರುನೂರು, ಐದುನೂರು)

(ಉ) ತನ್ನ ಓಲಗಕ್ಕೆ ಬಂದ...............ಉಂಬಳಿ ಗ್ರಾಮಗಳನ್ನು ಕೊಟ್ಟನು. (ಶೂರರಿಗೆ, ವಿದ್ವಾಂಸರಿಗೆ, ಕೀರ್ತನಕಾರರಿಗೆ)

(ಊ ) ಪ್ರತಿಯೊಬ್ಬ........ಎಮ್ಮೆಯ ಮೊಸರು, ಧಮ್ಮಕ್ಕಿಯ ಅನ್ನ ದಿನಾಲು ಕೊಡಬೇಕೆಂದು ಕಟ್ಟಳೆ ಮಾಡಿದ್ದನು. (ರೋಗಿಷ್ಟನಿಗೆ, ಭಿಕ್ಷು-ಕನಿಗೆ, ಕೈದಿಗೆ)

(ಇ) ಕಾಶಿಯಿಂದ...................ಸ್ವಾಮಿಗಳನ್ನು ಕರೆಯಿಸಿಕೊಂಡು ಅವರಿಂದ ಮಂತ್ರೋಪದೇಶವನ್ನು ಹೊಂದಿದನು. (ಮುದ್ದುವೀರ, ಚೆನ್ನ ವೀರ, ಸಿದ್ಧವೀರ)

## ೩೫. ಹೈದರ ಅಲಿ

ಇವನ ತಂದೆಯ ಹೆಸರು ಫತ್ತೇ ಮುಹಮ್ಮದ. ಇವನು ಬೂದೀ ಕೋಟೆಯ ಜಹಗೀರದಾರನಿದ್ದನು. ಇವನ ಹೆಂಡತಿಯ ಹೆಸರು ಮಜೀದಾ ಬೇಗಮ್. ಇವಳ ಹೊಟ್ಟೆಯಿಂದ ಕ್ರಿ. ಶ. ೧೭೨೨ ರಲ್ಲಿ ಹೈದರ ಅಲಿಯು ಬೂದೀ ಕೋಟೆಯಲ್ಲಿ ಹುಟ್ಟಿದನು. ಕೆಲವು ವರುಷಗಳ ತರುವಾಯ ಫತ್ತೇ ಮುಹಮ್ಮದನು ಯುದ್ಧದಲ್ಲಿ ಮಡಿದನು. ಆಗ ಇವರಿಗೆ ಯಾರೂ ದಿಕ್ಕಿಲ್ಲ ದಂತಾಯಿತು. ತಾಯಿಯು ಮಕ್ಕಳನ್ನು ಕಟ್ಟಿಕೊಂಡು ಬೆಂಗಳೂರಿಗೆ ಹೋಗಿ ಅಲ್ಲಿಯೇ ನಿಂತುಬಿಟ್ಟಳು. ಬಡತನದ ಮೂಲಕ ಮಕ್ಕಳಿಗೆ ವಿದ್ಯಾ ಭ್ಯಾಸವನ್ನು ಮಾಡಿಸುವದು ಅವಳಿಂದಾಗಲಿಲ್ಲ. ಹೊಟ್ಟೆಯ ಪಾಡಿಗಾಗಿ ಅವಳು ಮೊದಲು ಹೈದರನ ಅಣ್ಣನನ್ನು ದಂಡಿನಲ್ಲಿ ಸೇರಿಸಿ, ಆ ಮೇಲೆ ಇವ ನನ್ನೂ ಅಲ್ಲಿಯೇ ಸಿಪಾಯಿಯ ಕೆಲಸಕ್ಕೆ ಇಟ್ಟುಬಿಟ್ಟಳು. ಸಿಪಾಯಿ ಇದ್ದಾಗ ಶೌರ್ಯವನ್ನು ತೋರಿಸಿ ಫೌಜದಾರನಾದನು.

ಒಮ್ಮೆ ಪೇಶವೆಯು ಮೈಸೂರ ಅರಸನನ್ನು ಸೋಲಿಸಿ ಅವನ ಹನ್ನೆರಡು ಊರುಗಳನ್ನು ಗೆದ್ದುಕೊಂಡು ಅವುಗಳ ಮೇಲೆ ತನ್ನ ಸರದಾರರನ್ನು

ನಿಯಮಿಸಿಹೋಗಿದ್ದನು. ಇದನ್ನು ನೋಡಿ ಅಭಿಮಾನಿಯೂ ಪರಾಕ್ರಮಿಯೂ ಆದ ಹೈದರನಿಗೆ ಸಹನವಾಗಲಿಲ್ಲ. ತನ್ನ ದಂಡು ತಕ್ಕೊಂಡು ಹೋಗಿ ಮರಾಠಾ ಸರದಾರರನ್ನೆಲ್ಲ ಹೊಡೆದೋಡಿಸಿ ತನ್ನ ಆರಸನ ಊರುಗಳನ್ನೆಲ್ಲ ತಿರುಗಿ ಸಂಪಾದಿಸಿದನು. ಹೈದರನ ಈ ಪರಾಕ್ರಮವನ್ನು ನೋಡಿ ಮೈಸೂರ ಆರಸನು ಈತನನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡುಬಿಟ್ಟನು.



ಹೈದರ ಆಲಿ

ಸೇನಾಪತಿಯಾದ ಮೇಲೆ ಈತನ ವರ್ಚಸ್ಸು ಬೆಳೆದು ಸರ್ವಾಧಿಕಾರಿಯಾಗಿ ಬಿಟ್ಟನು. ಆರಸನು ಗಾಬರಿಯಾಗಿ ಈತನನ್ನು ಸೇನಾಪತಿಯ ಕೆಲಸದಿಂದ ತೆಗೆದುಹಾಕಬೇಕೆಂದು ಒಳಸಂಚು ನಡಿಸಿದನು. ಚಾಣಾಕ್ಷನಾದ ಹೈದರನಿಗೆ ಇದು ಗೊತ್ತಾಯಿತು. ಕೂಡಲೆ ಆರಸನನ್ನು ಪಟ್ಟದಿಂದ ತಳ್ಳಿ ತಾನೇ ಕ್ರಿ.ಶ. ೧೭೬೧ ರಲ್ಲಿ ಆರಸನಾದನು. ಆರಸು ಮನೆತನದವರಿಗೆ ಉಂಬಳಿ ಎಂದು ಕೆಲ ಹಣವನ್ನು ಕೊಡುತ್ತಿದ್ದನು.

ಆಗಿನ ಕಾಲಕ್ಕೆ ಉತ್ತರ ಕರ್ನಾಟಕದ ತುಂಬೆಲ್ಲ ಚಿಕ್ಕ ಚಿಕ್ಕ ಸಂಸ್ಥಾನಿಕರೇ ರಾಜ್ಯವಾಳುತ್ತಿದ್ದರು. ಒಂದು ದಂಡು ತಕ್ಕೊಂಡು ಹೋಗಿ ಅವರನ್ನೆಲ್ಲ ಬಗ್ಗುಬಡಿದು, ಅವರ ಕಡೆಯಿಂದ ಹೇರಳವಾದ ಕಪ್ಪಕಾಣಿಕೆಗಳನ್ನು ಎತ್ತಿ, ಅವರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿ ಶ್ರೀರಂಗಪಟ್ಟಣಕ್ಕೆ ಬಂದನು. ಆಗ ತನ್ನ ಹೆಸರಿನ ನಾಣ್ಯಗಳನ್ನು ಮಾಡಿಸಿದನು. ಇಂಗ್ಲಿಷರನ್ನು ಸಹ ಒಂದೆರಡು ಸ್ಥಳಗಳಲ್ಲಿ ಸೋಲಿಸಿದ್ದನು. ಅವರಗೂಡ ಕೊನೆಯ ಯುದ್ಧವನ್ನು ಮಾಡುತ್ತಿರುವಾಗ ಚಿತ್ತೂರಿನಲ್ಲಿ ಕ್ರಿ. ಶ. ೧೭೮೨ರಲ್ಲಿ ಅರಸು ಹುಣ್ಣಿನಿಂದ ಮಡಿದನು.

ಇವನ ಶರೀರದಿಂದ ಬಡಕನು ಮತ್ತು ಸಾಧಾರಣ ನಿಲುವಿಕೆಯವನು. ತಲೆಯ ಮೇಲೆ ಮಿಂಚುವ ಕೆಂಪು ಬಣ್ಣದ ಮುಂಡಾಸವು. ಮೈಮೇಲೆ ಬಿಳಿ ಬಣ್ಣದ ಪೋಷಾಕುಗಳು. ಟೊಂಕದ ಮೇಲೊಂದು ರೇಶಿಮೆಯ ಉದ್ದವಾದ ಪಟ್ಟಿಯನ್ನು ಕಟ್ಟಿಕೊಂಡಿರುತ್ತಿದ್ದನು. ಡೌಲಿನ ಪೋಷಾಕಿನ ಮೇಲೆ ಇವನ ಪ್ರೇಮ ಬಹಳ. ಈತನು ಹುಟ್ಟಾಜಾಣನು. ಮತ್ತು ಬಡತನದಲ್ಲಿ ಬೆಳೆದವನು. ಬಡತನದಲ್ಲಿದ್ದಾಗಲೇ ಮನುಷ್ಯನ ಬುದ್ಧಿವಂತಿಕೆ,ವ್ಯವಹಾರ ಚಾತುರ್ಯಗಳು ಬೆಳೆಯುತ್ತವೆ. ಓದು ಬರೆಹಗಳ ಗಂಧವಿಲ್ಲದಿದ್ದರೂ ಕೂಡಾ ಹೆಸರಾದ ಮುತ್ಸದ್ದಿಯಾದನು. ಒಂದೇ ವೇಳೆಗೆ ಮೂರು ನಾಲ್ಕು ವಿಷಯಗಳ ಕಡೆಗೆ ಲಕ್ಷ್ಯವಿಟ್ಟು ಕೆಲಸಮಾಡುತ್ತಿದ್ದನು. ಉದಾಹರಣಾರ್ಥವಾಗಿ, ಸಂಗೀತವನ್ನು ಕೇಳುವದು, ಪತ್ರವನ್ನು ಓದಿಸಲಿಕ್ಕೆ ಹಚ್ಚಿ ಕೇಳುವದು, ಹುಕುಮುಗಳನ್ನು ಹೇಳಿ ಬರೆಯಿಸುವದು, ಇವುಗಳನ್ನೆಲ್ಲ ಒಂದೇ ವೇಳೆಯಲ್ಲಿ ಮಾಡುತ್ತಿದ್ದನಂತೆ! ವೈರಿಯ ಯೋಗ್ಯತೆಯನ್ನು ಕಂಡು ಹಿಡಿಯುವಲ್ಲಿ ಒಳ್ಳೆ ಚಾಣಾಕ್ಷನಿದ್ದನು. ವೇಳೆಗೆ ಸರಿಯಾಗಿ ಕೆಲಸ ಮಾಡುವದರಲ್ಲಿ ಹೆಸರಾಗಿದ್ದನು. ಪರಾಕ್ರಮದಲ್ಲಿ ಸಿಂಹನಂತಿದ್ದನು. ವೈರಿಗಳು ಸಹ ಈತನ ಪರಾಕ್ರಮವನ್ನು ನೋಡಿ ಬೆರಳು ಕಚ್ಚುತ್ತಿದ್ದರು. ಪರಾಕ್ರಮಿ ಇದ್ದಷ್ಟೇ ಉದಾರ ಸ್ವಭಾವದವನೂ ಇದ್ದನು. ಉತ್ತಮ ಕೆಲಸ ಮಾಡಿದ ಅಧಿಕಾರಿಗಳಿಗೆ ಮಿತಿಮೀರಿ ಇನಾಮುಗಳನ್ನು ಕೊಡುತ್ತಿದ್ದನು. ತಪ್ಪಿದವರಿಗೆ ಕಠೋರತನದಿಂದ ಶಿಕ್ಷಿಸುತ್ತಿದ್ದನು. ಇಷ್ಟೆಲ್ಲ ಗುಣಗಳಿದ್ದುದರಿಂದಲೇ ಸಿಪಾಯಿಯಾಗಿದ್ದವನು ಮೈಸೂರಿನ ಅರಸನಾದನು.

## ಅಭ್ಯಸನಗಳು

೧. ಇವನ ರೂಪ, ಪೋಷಾಕು, ಗುಣಗಳ ಬಗೆಗೆ ಸ್ವಲ್ಪದರಲ್ಲಿ ಬರೆಯಿರಿ

೨. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸದಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದದ್ದೊಂದನ್ನು ಆರಿಸಿಕೊಂಡು ವಾಕ್ಯಗಳನ್ನು ಪೂರ್ಣ ಮಾಡಿ ಬರೆಯಿರಿ:—

(ಅ) ಇವನ ತಂದೆಯ ಹೆಸರು.... .. ........( ಶೇಖ ಮುಹಮ್ಮದ, ಸಾಲೇ ಮುಹಮ್ಮದ, ಫತ್ತೇ ಮುಹಮ್ಮದ )

(ಆ) ಇವನ ತಾಯಿಯ ಹೆಸರು ... .......(ಖಜೀದಾ ಬೇಗಮ್, ಮಜೀದಾ ಬೇಗಮ್, ನಜೀದಾ ಬೇಗಮ್)

(ಇ) ಇವನ ಜನ್ಮಸ್ಥಳ... ........(ಬೂದೀಕೋಟೆ, ಮಿಶ್ರೀಕೋಟೆ, ಹೊಸಕೋಟೆ)

(ಈ) ಸಿಪಾಯಿ ಇದ್ದಾಗ ಶೌರ್ಯತೋರಿಸಿ ದಿಂಡಗಲ್ಲಿನ....ನಾದನು. (ಹವಾಲ್ದಾರ, ಜಮಾದಾರ, ಫೌಜದಾರ

(ಉ) ಮರಾಠಾ ಸರದಾರರನ್ನು ಹೊಡೆದೋಡಿಸಿದ್ದರಿಂದ ಅರಸನು ಮೆಚ್ಚಿ ಈತನನ್ನು............ಯನ್ನಾಗಿ ಮಾಡಿದನು. (ಮಂತ್ರಿ, ಸೇನಾಪತಿ, ಮುಖ್ಯ ಮಂತ್ರಿ)

(ಊ) ಇವನು ಕ್ರಿ. ಶ........ರಲ್ಲಿ ಮಡಿದನು. (೧೭೮೨, ೧೬೮೨, ೧೮೮೨)

# ೩೭. ಟೀಪುಸುಲ್ತಾನ

ಇವನ ತಂದೆಯಾದ ಹೈದರ್ಅಲಿಗೆ ಬಹುದಿನಗಳ ವರೆಗೆ ಮಕ್ಕಳಾಗಲಿಲ್ಲ. ಆದುದರಿಂದ ಹೈದರನೂ ಅವನ ಹೆಂಡತಿಯೂ ಆರ್ಕಾಟದಲ್ಲಿದ್ದ ಟೀಪುಸುಲ್ತಾನ ಎಂಬ ಪೀರನಿಗೆ ಹರಕೆಹೊತ್ತು ಒಳ್ಳೆ ಭಕ್ತಿ-ವಿಶ್ವಾಸಗಳಿಂದ ನಡಕೊಂಡರು. ಮುಂದೆ ಹೈದರನ ಹೆಂಡತಿಯು ಗರ್ಭಿಣಿಯಾಗಿ ದೇವನಹಳ್ಳಿಯಲ್ಲಿ ಕ್ರಿ. ಶ. ೧೭೫೩ ರಲ್ಲಿ ಒಂದು ಗಂಡುಕೂಸನ್ನು ಹಡೆದಳು. ಅದಕ್ಕೆ ಆ ಪೀರನ ಹೆಸರನ್ನೇ ಇಟ್ಟುಬಿಟ್ಟರು. ಇವನೇ ಮುಂದೆ ಟೀಪುಸುಲ್ತಾನನಾದನು. ರಾಜಕುಮಾರರಿಗೆ ಆಗಿನ ಕಾಲಕ್ಕೆ ಕಲಿಸುತ್ತಿದ್ದ ಎಲ್ಲ ಯುದ್ಧದ ವಿದ್ಯೆಗಳನ್ನು ಹೈದರನು ಮಗನಿಗೆ ಕೊಡಿಸಿದನು. ಇವಲ್ಲದೆ ಇವನಿಗೆ ಆರಬೀ, ಪಾರಸೀ, ಫ್ರೆಂಚ ಮತ್ತು ದೇಶೀಯ ಭಾಷೆಗಳನ್ನೂ ಇತಿಹಾಸ, ಭೂಗೋಲ, ಗಣಿತ ಮೊದಲಾದ ಉಪಯುಕ್ತ ವಿಷಯಗಳನ್ನೂ ಕಲಿಸುವ ವ್ಯವಸ್ಥೆಯನ್ನು ಮಾಡಿದ್ದನು. ಟೀಪುವು ಚುರುಕು ಬುದ್ಧಿಯುವನಾದುದರಿಂದ ಎಲ್ಲ ವಿಷಯುಗಳನ್ನು ಮನಸ್ಸುಗೊಟ್ಟು ಕಲಿತು ಅವುಗಳಲ್ಲಿ ಬೇಗನೆ ಪಾರಂಗತನಾದನು. ಚಿಕ್ಕವನಿದ್ದಾಗಲೇ ತಂದೆಯಗೂಡ ಯುದ್ಧಕ್ಕೆ ಹೋಗಿ ಅವನಿಗೆ ಸಹಾಯು ಮಾಡತೊಡಗಿದನು. ಇದರಿಂದ ಇವನಿಗೆ ಯುದ್ಧಕಲೆಯ ಅನುಭವವು ಪೂರ್ಣವಾಗಿ ಬಂದುಬಿಟ್ಟಿತು. ಪ್ರಾಯಕ್ಕೆ ಬರುವದರೊಳಗಾಗಿ ಈತನು ತೋರಿಸಿದ ಪರಾಕ್ರಮುಗಳಿಗೆ ಮೆಚ್ಚಿ ಜನರೆಲ್ಲರೂ ಈತನನ್ನು "ಮೈಸೂರಿನ ಹುಲಿ" ಎಂದು ಕರೆಯುಹತ್ತಿದರು.

ತಂದೆಯು ತರುವಾಯು ಇವನೇ ಪಟ್ಟವೇರಿದನು. ತಂದೆಯಂತೆ ಈತನೂ ಮೊಟ್ಟಮೊದಲು ಉತ್ತರ ಕರ್ನಾಟಕವನ್ನಾಳುತ್ತಿದ್ದ ದೇಸಾಯಿಯರನ್ನೆಲ್ಲ ಬಗ್ಗುಬಡಿದನು. ಆಮೇಲೆ ತ್ರಿಚನಾಪಳ್ಳಿಯ ಅರಸನನ್ನು ಸೋಲಿಸಿ ಅವನ ರಾಜ್ಯವನ್ನು ಗೆದ್ದುಕೊಂಡನು. ಆ ಅರಸನು ದಿಕ್ಕಿಲ್ಲದವನಾಗಿ ಇಂಗ್ಲಿಷರಿಗೆ ಮೊರೆಹೊಕ್ಕನು. ಇಂಗ್ಲಿಷರು ಅವನ ಮೇಲೆ ದಯೆ ತೋರಿಸಿ ಲಾರ್ಡ್ ಕಾರ್ನವಾಲೀಸನನ್ನು ದಂಡು ಕೊಟ್ಟು ಕಳಿಸಿದರು. ಇದೇ ಸಮಯದಲ್ಲಿ ಟೀಪುವಿನ ಮೇಲೆ ಹಲ್ಲು ತಿನ್ನುತ್ತಿದ್ದ ಪೇಶವೆಯೂ ನಿಜಾಮನೂ ಬಂದು ಕಾರ್ನವಾಲೀಸನನ್ನು ಕೂಡಿಕೊಂಡರು. ಇವರೆಲ್ಲರೂ **ಶ್ರೀರಂಗಪಟ್ಟಣಕ್ಕೆ**

ಮುತ್ತಿಗೆ ಹಾಕಿದರು. ಟೀಪುವಿನ ಆಟ ನಡೆಯುಲಿಲ್ಲವಾದುದರಿಂದ ಒಪ್ಪಂದ ಮಾಡಿಕೊಂಡನು. ಒಪ್ಪಂದದ ಪ್ರಕಾರ ಟೀಪುವು ಅರ್ಧ ರಾಜ್ಯವನ್ನೂ, ಮೂರು ಕೋಟಿಗಳನ್ನೂ, ಮೂವತ್ತು ಲಕ್ಷ ರೂಪಾಯಿಗಳನ್ನೂ ಕೊಡ ಬೇಕೆಂದು ಗೊತ್ತಾಯಿತು. ಅದರಂತೆ ಅರ್ಧ ರಾಜ್ಯವನ್ನೂ ಮೂರು ಕೋಟಿ ಗಳನ್ನೂ ಅವರೆಲ್ಲರಿಗೆ ಹಂಚಿಕೊಟ್ಟನು. ದುಡ್ಡನ್ನು ಮಾತ್ರ ಕೊಡುವವಾಗ ಲಿಲ್ಲ. ದುಡ್ಡು ಮುಟ್ಟುವವರೆಗೆ ತನ್ನ ಮಕ್ಕಳನ್ನು ಇಂಗ್ಲಿಷರ ಕಡೆರ ಅಡವು ಇಡಬೇಕಾಯಿತು. ಇದರಿಂದ ಈತನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾ ಯಿತು.



ಟೀಪುಸುಲ್ತಾನ

ಫ್ರೆಂಚರನ್ನು ಇಟ್ಟುಕೊಂಡು ತನ್ನ ಜನರಿಗೆ ದಂಡಿನ ಹೊಸ ಶಿಕ್ಷಣ ವನ್ನು ಕೊಡಿಸಿ ತನ್ನ ದಂಡನ್ನು ಬಲಿಷ್ಠವನ್ನಾಗಿ ಮಾಡಿದನು. ಆ ಸಮಯ ದಲ್ಲಿ ಫ್ರಾನ್ಸ ದೇಶದ ವೀರನಾದ ನೆಪೋಲಿಯನ್ನನೊಡನೆ ಪತ್ರವ್ಯವಹಾರ ಮಾಡಿ ಇಂಗ್ಲಿಷರನ್ನು ಈ ದೇಶದಿಂದ ಹೊರಗೆ ಹಾಕುವ ಸಂಚನ್ನು ಒಳಗಿಂ ದೊಳಗೆ ನಡೆಸಿದನು. ಈ ಗುಟ್ಟು ಇಂಗ್ಲಿಷರಿಗೆ ಕೂಡಲೆ ಗೊತ್ತಾಯಿತು.

ಅವರು ಈತನನ್ನು ಪೂರಾ ಮುರಿದು ಬಿಡಬೇಕೆಂದು ನಿಶ್ಚಯಿಸಿ ಶ್ರೀರಂಗಪಟ್ಟಣವನ್ನು ಕ್ರಿ. ಶ. ೧೭೯೯ ರಲ್ಲಿ ಮುತ್ತಿದರು. ಯುದ್ಧವು ಪ್ರಾರಂಭವಾಯಿತು. ಇಂಗ್ಲಿಷರು ಮಧ್ಯಾಹ್ನದಲ್ಲಿ ಕೋಟೆಯನ್ನು ಮುರಿದು ಒಳಹೊಕ್ಕರು. ಆಗ ಟೀಪುವು ಊಟಕ್ಕೆ ಕುಳಿತಿದ್ದನು. ಈ ಸುದ್ದಿ ಕೇಳಿದ ಕೂಡಲೆ ಊಟ ಬಿಟ್ಟು ಚಿಲಕತ್ತನ್ನು ಹಾಕಿಕೊಂಡು ಕುದುರೆಯನ್ನೇರಿ ಯುದ್ಧಕ್ಕೆ ನಡೆದನು ವೈರಿಗಳನ್ನು ಸಂಹರಿಸುತ್ತಿರುವಾಗ ಗುಂಡುಗಳು ಬಡಿದು ಕೆಳಗೆ ಬಿದ್ದನು. ಸಾಯುವ ಮುನ್ನ ಒಬ್ಬ ವೈರಿಯು ಅವನ ಕೈಯೊಳಗಿನ ಹತ್ಯಾರವನ್ನು ಕಸಿದುಕೊಳ್ಳಲು ಬಂದಾಗ ಅವನನ್ನು ಕೊಂದು ಹಾಕಿ ಪ್ರಾಣ ಬಿಟ್ಟನು.

ಟೀಪುವು ನಿಜವಾಗಿ ಕಡುಗಲಿ, ಆದರೆ ಹಟಮಾರಿ. ಇಂಗ್ಲಿಷರನ್ನು ಈ ದೇಶದಿಂದ ಹೊರಗಟ್ಟಬೇಕೆಂಬುವವರಲ್ಲಿ ಇವನೊಬ್ಬನು. ಇಡಿಯ ದಕ್ಷಿಣ ಭಾರತವನ್ನು ಜಯಿಸಿ ಬಾದಶಹನಾಗಿ ಆಳಬೇಕೆಂದು ಇವನ ಹೆಬ್ಬಯಕೆ ಇತ್ತು. ಮಹಾತ್ವಾಕಾಂಕ್ಷಿಯಾಗಿದ್ದರೂ, ತಂದೆಯ ಹಾಗೆ ವ್ಯವಹಾರ ಚತುರನೂ ಮುತ್ಸದ್ದಿಯೂ ಆಗಿರಲಿಲ್ಲ. ಆದುದರಿಂದ ಇವನ ಹೆಬ್ಬಯಕೆಗಳಾವವೂ ಕೈಗೂಡಲಿಲ್ಲ. ಮೇಲಾಗಿ, ಇಸ್ಲಾಮ ಧರ್ಮದ ಹುಚ್ಚೊಂದು ಇವನ ತಲೆಯಲ್ಲಿ ಸೇರಿತ್ತು. ಯುದ್ಧದಲ್ಲಿ ಸೋತವರನ್ನೂ ಸೆರೆಸಿಕ್ಕವರನ್ನೂ ಬಲಾತ್ಕಾರದಿಂದ ಮುಸಲ್ಮಾನರನ್ನಾಗಿ ಮಾಡುತ್ತಿದ್ದನು. ಇದರಿಂದ ಎಲ್ಲ ದೇಶೀಯ ಅರಸರು ಈತನ ಹಗೆಗಳಾದರು. ಇಂಗ್ಲಿಷರಂತಹ ಬಲಾಢ್ಯ ವೈರಿಗಳನ್ನು ಮುರಿಬಡಿಯಲು ಎಲ್ಲ ದೇಶೀಯ ಅರಸರ ಮಿತ್ರತ್ವವನ್ನೂ ಸಹಕಾರವನ್ನೂ ಸಂಪಾದಿಸಬಹುದಾಗಿತ್ತು.

## ಅಭ್ಯಸನಗಳು

೧. ಟೀಪುವು ಸಣ್ಣವನಿದ್ದಾಗ ಯಾವ ಯಾವ ವಿದ್ಯೆಗಳನ್ನು ಕಲಿತನು?

೨. ಶ್ರೀರಂಗಪಟ್ಟಣದ ಒಪ್ಪಂದದ ಕರಾರುಗಳಾವವು? ಟೀಪುವು ತನ್ನ ಮಕ್ಕಳನ್ನು ಏಕೆ ಅಡವು ಇಡಬೇಕಾಯಿತು?

೩. ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.

(ಅ) ಈತನು............ಯಲ್ಲಿ ಕ್ರಿ. ಶ. ........ರಲ್ಲಿ ಹುಟ್ಟಿದನು.

(ಆ) ಈತನು ತೋರಿಸಿ............ಗಳಿಗೆ ಮೆಚ್ಚಿ ಜನರೆಲ್ಲರೂ ಈತನನ್ನು..            .ಎಂದು ಕರೆಯುಹತ್ತಿದರು.

(ಇ) ............ಯು ಅರಸನನ್ನು ಸೋಲಿಸಿ ಅವನ ರಾಜ್ಯವನ್ನು ಕಸಿದುಕೊಂಡದ್ದರಿಂದ ಅವನು............ರಿಗೆ ಮೊರೆಹೊಕ್ಕನು.

(ಈ) ಫ್ರಾನ್ಸ ದೇಶದ ವೀರನಾದ............ನೊಡನೆ ಪತ್ರವ್ಯವಹಾರ ಮಾಡಿ............ರನ್ನು ಈ ದೇಶದಿಂದ ಹೊರಗೆ ಹಾಕುವ.... .. ........ಸ್ನು ಹೂಡಿದ್ದನು.

(ಉ) ಇಂಗ್ಲಿಷರು............... ಯ ಬಾಗಿಲವನ್ನು ಮುರಿದು ಒಳ ಹೊಕ್ಕ........ಯನ್ನು ಕೇಳಿ............ಮಾಡುವದನ್ನು ಬಿಟ್ಟು............ನ್ನು ಹಾಕಿಕೊಂಡು........ಯನ್ನು ಹತ್ತಿ ಯುದ್ಧಕ್ಕೆ ನಡೆದನು.

(ಊ) ಈತನು ಕ್ರಿ. ಶ. ........ರಲ್ಲಿ ಮಡಿದನು.

## ೩೭. ಕಿತ್ತೂರ ಚೆನ್ನಮ್ಮ

ಈಗಿನ ಬೆಳಗಾವಿ ಜಿಲ್ಹೆಯಲ್ಲಿ ಕಿತ್ತೂರು ಎಂಬದೊಂದು ದೊಡ್ಡ ಗ್ರಾಮವಿದೆ. ಅದು ಹಿಂದಕ್ಕೆ ಒಂದು ದೇಶಗತಿಯ ರಾಜಧಾನಿಯಾಗಿತ್ತು. ಮಲ್ಲಸರ್ಜ ಎಂಬವನು ಅದರ ದೇಸಾಯಿ ಇದ್ದನು. ಇವನಿಗೆ ಅವ್ವರುದ್ರವ್ವ ಎಂಬ ಹೆಂಡತಿ ಇದ್ದಳು. ಅವಳ ಹೊಟ್ಟೆಯಿಂದ ಶಿವಲಿಂಗರುದ್ರಸರ್ಜನೆಂಬ ಮಗನು ಹುಟ್ಟಿದನು. ಕೆಲವು ವರುಷಗಳ ತರುವಾಯ ಅವ್ವರುದ್ರವ್ವನು ಲಿಂಗೈಕ್ಯಳಾದಳು. ಆ ವೇಳೆ ಮಲ್ಲಸರ್ಜನು ಈ ನಮ್ಮ ಕಥಾನಾಯಿಕೆಯಾದ ಚೆನ್ನವ್ವನನ್ನು ಮದುವೆಯಾದನು. ಮುಂದೆ ದುರ್ದೈವದಿಂದ ಕೆಲವೇ ವರುಷಗಳಲ್ಲಿ ಮಲ್ಲಸರ್ಜ ಮತ್ತು ಶಿವಲಿಂಗರುದ್ರಸರ್ಜ ಇವರಿಬ್ಬರೂ ಲಿಂಗೈಕ್ಯ

ರಾಧರು. ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾಗಿಬಿಟ್ಟಳು. ಆಗಂತೂ ಇವಳಿಗೆ ಆದ ದುಃಖವನ್ನು ಹೇಳಲಾಸಲ್ಲ. ಇವಳಿಗೆ ಆಕಾಶವೇ ಕಡಕೊಂಡು ಬಿದ್ದಂತಾಯಿತು. ದುಃಖಮಾಡುತ್ತ ಕುಳಿತರೆ ದೇಸಗತಿಯೆಲ್ಲ ಹಾಳಾಗಿ ಹೋಗುವದೆಂದು ತಿಳಿದು, ತನ್ನ ಸಂಬಂಧಿಕರಾದ ಮಾಸ್ತಮರಡಿಯ ಗೌಡರ ಮಗನನ್ನು ದತ್ತಕ ತೆಗೆದುಕೊಂಡಳು. ಆವನು ಇನ್ನೂ ಚಿಕ್ಕವನಿದ್ದನು. ಆವನಿಗೆ ಸವಾಯಿ ಮಲ್ಲಸರ್ಜ ಎಂದು ಹೆಸರಿಟ್ಟು ತಾನೇ ಉತ್ತಮ ರೀತಿಯಿಂದ ರಾಜ್ಯಭಾರ ನಡೆಸಿದಳು. ಇವಳ ಆಳಿಕೆಯೆಂದರೆ ಕಿತ್ತೂರ ನಾಡಿನವರ ಸುಖ ಕಾಲ. ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದಳು. ಈಗಲೂ ಆಕೆಯನ್ನು ಆ ನಾಡಿನ ಜನರು ಕೊಂಡಾಡುತ್ತಾರೆ.

ದೇಸಾಯಿಯು ಸತ್ತ ಬಳಿಕ ದತ್ತಕ ಮಾಡಿರುವರೆಂಬ ಸುದ್ದಿಯು ಇಂಗ್ಲಿಷ ಸರಕಾರದವರಿಗೆ ಮುಟ್ಟಿತು. ಆ ಕಾಲಕ್ಕೆ ಕಲೆಕ್ಟರನಾಗಿದ್ದ ಥ್ಯಾಕರೆ ಸಾಹೇಬನು ಕಿತ್ತೂರ ದೇಸಗತಿಯ ಸ್ಥಿತಿಗತಿಗಳನ್ನು ತಿಳಕೊಳ್ಳಲು ಬರುವ ನೆಂಬ ಸುದ್ದಿಯು ದೇಸಾಯಿಣಿಗೆ ಗೊತ್ತಾಯಿತು. ಚೆನ್ನವ್ವನು ಮಹಾ ಅಭಿಮಾನಿ. ಇಂಗ್ಲಿಷರು ತನ್ನ ದೇಸಗತಿಯ ಕಾರಭಾರದಲ್ಲಿ ಕೈಹಾಕುವದು ಈಕೆಗೆ ಸಹನವಾಗಲಿಲ್ಲ. ಇವಳಂತೂ ಹುಟ್ಟಾ ಶೂರಳು. ಇವಳ ಮುಖದ ಮೇಲೆ ಕ್ಷಾತ್ರತೇಜವು ತುಂಬಿ ತುಳುಕುತ್ತಿತ್ತು. ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಕುದುರೆಯನ್ನೇರಿ ವೀರಾವೇಶದಿಂದ ಹೊರಟಳೆಂದರೆ, ಇವ ಳನ್ನು ನೋಡಿದವರ ಮೈಯಲ್ಲಿಯೂ ವೀರಶ್ರೀಯು ತುಂಬಿ ಬರುತ್ತಿತ್ತಂತೆ! ಇಂತಹ ಅಭಿಮಾನಿಯಾದ ವೀರ ದೇಸಾಯಿಣಿಯ ಜನಪ್ರಿಯ ಆಡಳಿತೆ ಯಲ್ಲಿ ಇಂಗ್ಲಿಷರು ಕೈಹಾಕಬಾರದಾಗಿತ್ತು. ಇವಳು ಭರದಿಂದ ಯುದ್ಧ ಸೌರಣೆಯನ್ನು ಮಾಡಹತ್ತಿದಳು. ಒಳಗಿಂದೊಳಗೆ ಈ ಸುದ್ದಿಯು ಇಂಗ್ಲಿಷರಿಗೆ ಹತ್ತಿತಾದುದರಿಂದ, ಥ್ಯಾಕರೆ ಸಾಹೇಬನು ತನ್ನ ದಂಡು ತಕ್ಕೊಂಡು ಬಂದು ಕಿತ್ತೂರನ್ನು ಮುತ್ತಿದನು. ಚೆನ್ನವ್ವನು ಯುದ್ಧದ ಸಿದ್ಧತೆ ಮಾಡಿಯೇ ಇಟ್ಟದ್ದಳು. ಒಂದೆರಡು ದಿನ ದಾರಿ ಕಾಯ್ದು, ವೀರ ದೇಸಾಯಿಣಿಯು ಕೋಟೆಯ ಬಾಗಿಲು ತೆರೆಯಿಸಿ ತನ್ನ ಸೈನ್ಯದೊಂದಿಗೆ ವೈರಿಗಳ ಮೇಲೆ ಸಾಗಿದಳು. ಎರಡೂ ದಂಡಿನವರಿಗೆ ಕೈಗೆಕೈ ಹತ್ತಿತು. ದೇಸಾಯಿಣಿಯ ಹೊಡೆತಕ್ಕೆ ಅಂಜಿ ಇಂಗ್ಲಿಷರ ದಂಡಿನವರು ದಿಕ್ಕಾಪಾಲಾಗಿ ಓಡಿದರು. ಥ್ಯಾಕರೆ ಸಾಹೇಬನು ಮಡಿದನು. ಆವನ ಗೋರಿಯು ಧಾರವಾಡದಲ್ಲಿದೆ.

ಚೆನ್ನವ್ವ ದೇಸಾಯಿಣಿಯು ಈ ಯುದ್ಧದಲ್ಲಿ ತೋರಿಸಿ ಯುದ್ಧ-ಚಾತುರ್ಯ ಪರಾಕ್ರಮಗಳು ಜನರನ್ನೆಲ್ಲ ಬೆರಗುಗೊಳಿಸಿಬಿಟ್ಟವು. ಈ ಯುದ್ಧದಲ್ಲಿ ಸಂಪಾದಿಸಿದ ಜಯದಿಂದ ಇವಳು ತನ್ನ ಪ್ರಜೆಗಳೆಲ್ಲರ ನೆಚ್ಚು ಮೆಚ್ಚಿನ ದೇಸಾಯಿಣಿಯಾಗಿ ಬಿಟ್ಟಳು. ಆವಳು ಶೂರಳಿದ್ದಷ್ಟೇ ಕೋಮಲ ಹೃದಯದವಳೂ ಇದ್ದಳು. ಸೆರೆಸಿಕ್ಕ ಇಂಗ್ಲಿಷರ ಎಳೆವಯಸ್ಸಿನ ಹುಡುಗರನ್ನು ಪ್ರೀತಿಸಿ ಮುದ್ದಾಡಿ ಅವರನ್ನೆಲ್ಲ ಅವರವರ ತಂದೆತಾಯಿಗಳ ಕಡೆಗೆ ಕಳಿಸುವ ವ್ಯವಸ್ಥೆ ಮಾಡಿದಳು.



ಇಂಗ್ಲಿಷರ ಮಕ್ಕಳನ್ನು ಮುದ್ದಾಡುವದು

ಈ ಸೋಲಿನ ಸುದ್ದಿಯು ಇಂಗ್ಲಿಷರಿಗೆ ಮುಟ್ಟಿತು. ಈ ಸಲ ಇಂಗ್ಲಿಷರು ಬೆಳಗಾವಿಯಲ್ಲಿದ್ದ ಚಾಪ್ಲಿನ್ ಸಾಹೇಬನ ಕೈಯಲ್ಲಿ ಒಂದು ದೊಡ್ಡ ಬಲಿಷ್ಠವಾದ ಸೈನ್ಯವನ್ನು ಕೊಟ್ಟು ಕಿತ್ತೂರಿಗೆ ಕಳಿಸಿದರು. ಇಂತಹ ಬಲಾಢ್ಯವಾದ ಸೈನ್ಯದ ಎದುರಿಗೆ ದೇಸಾಯಿಣಿಯ ಆಟ ನಡೆಯಲಿಲ್ಲ. ಕ್ರಿ. ಶ. ೧೮೨೪ ರಲ್ಲಿ ಕಿತ್ತೂರು ಇಂಗ್ಲಿಷರ ವಶವಾಯಿತು. ಚೆನ್ನಮ್ಮ ದೇಸಾಯಿಣಿಯು ಮತ್ತು ಶಿವಲಿಂಗರುದ್ರಸರ್ಜನ ಹೆಂಡತಿ ವೀರಮ್ಮನು ಬೈಲಹೊಂಗಲ-

ವಲ್ಲಿದ್ದರು. ಅಲ್ಲಿಯೇ ಚೆನ್ನಮ್ಮನು ದೇಸಗತಿಯನ್ನು ಕಳಕೊಂಡ ಚಿಂತೆಯಿಂದ ಕೊರಗಿ ಲಿಂಗೈಕ್ಯಳಾದಳು. ಕಿತ್ತೂರನಾಡಿನ ಜನರು ತಮ್ಮ ಪ್ರೀತಿಯ ದೇಸಾಯಿಣಿಯ ಹೆಸರು ಚಿರಕಾಲ ಉಳಿಯಲೆಂದು ಕೃತ್ತಿಕಾ ನಕ್ಷತ್ರ ಪುಂಜ (ಸಮೂಹ) ಕ್ಕೆ 'ಚೆನ್ನಮ್ಮನ ದಂಡಿ' ಎಂದೂ ಮೃಗಶಿರಾ ನಕ್ಷತ್ರ ಪುಂಜಕ್ಕೆ 'ಚೆನ್ನಮ್ಮನ ಮಂಚ' ಎಂದೂ ಹೆಸರಿಟ್ಟಿದ್ದಾರೆ. ಆವಳ ವಿಷಯಕ್ಕೆ ಎಷ್ಟೋ ಲಾವಣಿ ಪದಗಳನ್ನು ಕಟ್ಟಿದ್ದಾರೆ. ಅವುಗಳನ್ನು ಜನರು ಭಕ್ತಿಯಿಂದಲೂ ಪ್ರೀತಿಯಿಂದಲೂ ಹಾಡುತ್ತಾರೆ. ಮತ್ತು ಹಾಡುಗಳನ್ನು ಕಿವಿಗೊಟ್ಟು ಕೇಳುತ್ತಾರೆ.

## ಅಭ್ಯಸನಗಳು

೧. ಥ್ಯಾಕರೆ ಸಾಹೇಬನ ಕೂಡ ಆದ ಯುದ್ಧವನ್ನು ಸ್ವಲ್ಪದರಲ್ಲಿ ಬರೆಯಿರಿ.

೨. ತೆರವಿದ್ದ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿ ಬರೆಯಿರಿ:-

(ಅ) ಇವಳ ಗಂಡನ ಹೆಸರು................

(ಆ) ತನ್ನ ಸಂಬಂಧಿಕರಾದ..............ಯ ಗೌಡರ................ ನನ್ನು ದತ್ತಕ ತೆಗೆದುಕೊಂಡಳು.

(ಇ) ದತ್ತಕ ಮಗನಿಗೆ .... .......ಎಂದು ಹೆಸರಿಟ್ಟಳು.

(ಈ) ಇಂಗ್ಲಿಷರು ಮೊದಲನೆಯ ಸಲ...............ಸಾಹೇಬನನ್ನು ...... ಗೆ ಮುತ್ತಿಗೆ ಹಾಕಲು ದಂಡಿನೊಡನೆ ಕಳಿಸಿಕೊಟ್ಟರು.

(ಉ) ಎರಡನೆಯ ಸಲ ....... ...ಸಾಹೇಬನನ್ನು ಒಂದು .......... ವಾದ ಸೈನ್ಯವನ್ನು ಕೊಟ್ಟು ಕಳಿಸಿದರು.

(ಊ) ...............ನಕ್ಷತ್ರ ಪುಂಜಕ್ಕೆ 'ಚೆನ್ನಮ್ಮನ ದಂಡಿ' ಎಂದು ಅನುತ್ತಾರೆ.

(ಎ)................ನಕ್ಷತ್ರ ಪುಂಜಕ್ಕೆ 'ಚೆನ್ನಮ್ಮನ ಮಂಚ' ಎಂದು ಅನ್ನುತ್ತಾರೆ.

# ಮಾದರಿಯ ಪ್ರಶ್ನೆಗಳು

[**ಶಿಕ್ಷಕ-ಶಿಕ್ಷಕಿಯರಿಗೆ ಸೂಚನೆಗಳು:**— ಪ್ರತಿಯೊಂದು ಕಥೆಯ ಕೊನೆಯಲ್ಲಿ ಕೆಲವು ಉಪಯುಕ್ತ ಅಭ್ಯಸನಗಳನ್ನು ಕೊಡುತ್ತ ಬಂದಿದೆ. ಅಲ್ಲಿ ಕೊಡಲು ಶಕ್ಯವಿಲ್ಲದ ಬೇರೆ ನಮೂನೆಯ ಕೆಲವು ಅಭ್ಯಸನಗಳನ್ನು ಇಲ್ಲಿ ಕೆಳಗೆ ಉದಾಹರಿಸಲಾಗಿದೆ. ಇಂತಹ ಪ್ರಶ್ನೆಗಳೇ ಇತ್ತೀಚೆಗೆ ವಿದ್ಯಾರ್ಥಿವೇತನ (ಸ್ಕಾಲರಶಿಪ್) ಪರೀಕ್ಷೆಗಳಲ್ಲಿಯೂ ಪ್ರಮಾಣಪತ್ರ ಪರೀಕ್ಷೆಗಳಲ್ಲಿಯೂ ಬರಲಿಕ್ಕೆ ಹತ್ತಿವೆ. ಕೆಳಗೆ ಕೊಟ್ಟವು ಕೇವಲ ಮಾದರಿಗಾಗಿ ಇವೆ. ಇಂತಹ ಅಭ್ಯಸನಗಳನ್ನು ಶಿಕ್ಷಕ-ಶಿಕ್ಷಕಿಯರು ತಮಗೆ ಬೇಕಾದಷ್ಟುವುಗಳನ್ನು ರಚಿಸಿಕೊಂಡು ಮಕ್ಕಳಿಗೆ ಹೆಚ್ಚೆಚ್ಚಾಗಿ ರೂಢಿ ಮಾಡಿಸಿದಷ್ಟು ಒಳಿತು.

ಈ ಅಭ್ಯಸನಗಳನ್ನು ರಚಿಸುವಲ್ಲಿ ಕೆಲವು ಉದ್ದೇಶಗಳಿವೆ. ಅಭ್ಯಸನಗಳನ್ನು ಬಿಡಿಸುವದೊಂದು ಮಕ್ಕಳಿಗೆ ಆಟವಾಗಿರಬೇಕು. ಇದು ಹೊಸ ಶಿಕ್ಷಣದ ವೈಶಿಷ್ಟ್ಯ. ಎರಡನೆಯದಾಗಿ, ತಾವು ಕಲಿಸಿದ ವಿಷಯವು ಮಕ್ಕಳಿಗೆ ಎಷ್ಟರ ಮಟ್ಟಿಗೆ ತಿಳಿಯಿತೆಂಬುದನ್ನು ಕಂಡುಹಿಡಿಯಲು ಅಳತೆಗೋಲಾಗಿರಬೇಕು. ಮೂರನೆಯದು, ಬೌದ್ಧಿಕ ಚಟುವಟಿಕೆಯನ್ನು ಕೆರಳಿಸುವಂತಹದಿರಬೇಕು. ನಾಲ್ಕನೆಯದು, ಕಲಿಸಿದ ವಿಷಯವು ಮಕ್ಕಳಿಗೆ ಮನದಟ್ಟಾಗಬೇಕು. ಈ ಉದ್ದೇಶಗಳಿಗನುಸರಿಸಿಯೇ ಕೆಳಗಿನ ಅಭ್ಯಸನಗಳನ್ನು ರಚಿಸಿ ತೋರಿಸಲಾಗಿದೆ.

ಮೂಲ ಶಿಕ್ಷಣವು ಈಗ ಎಲ್ಲೆಡೆಗಳಲ್ಲಿ ಜಾರಿಯಲ್ಲಿ ಬರಲಿದೆ. ಸಂಬಂಧೀಕರಣ (ಅನುಬಂಧ)ವು ಅದರ ಜೀವಾಳವು. ಸಂಬಂಧೀಕರಣಮಾಡಿ ಕಲಿಸುವದಕ್ಕೆ ಸಮವಾಯ ಪದ್ಧತಿಯೆನ್ನುವರು. ಈ ಹೊಸ ಪದ್ಧತಿಯ ಪ್ರಕಾರ ಚಟುವಟಿಕೆಯ ಮುಖಾಂತರವೇ ಮಕ್ಕಳಿಗೆ ಶಿಕ್ಷಣವನ್ನು ಕೊಡತಕ್ಕದ್ದು. ಚಟುವಟಿಕೆಯು ಆರ್ಥಿಕ (ಮೂಲ ಉದ್ಯೋಗಕ್ಕೆ ಸಂಬಂಧಿಸಿದ್ದು) ವಿರಬಹುದು. ಸಾಮಾಜಿಕವಿರಬಹುದು ಅಥವಾ ನೈಸರ್ಗಿಕವಿರಬಹುದು. ಈ ಮೂರರಲ್ಲಿ ಬೇಕಾದ ಒಂದನ್ನು ನಿಮ್ಮ ಪಾಠಕ್ಕೆ ನೀವು ಆರಿಸಿಕೊಳ್ಳಬಹುದು. ನೀವು ಆಯ್ದುಕೊಂಡ ಚಟುವಟಿಕೆಯ ಯೋಜನೆಯನ್ನು ಮಾತ್ರ

ಮೊದಲೇ ದೀರ್ಘಾಲೋಚನೆ ಮಾಡಿ ರಚಿಸಿ ಇಟ್ಟುಕೊಳ್ಳುವದು ಲೇಸು. ನಿಮ್ಮ ಯೋಜನೆಯನ್ನು ಎಷ್ಟು ಹೆಚ್ಚೆಚ್ಚು ಚೆಂದವಾಗಿ ಹಮ್ಮಿಕೊಳ್ಳುವಿರೋ ಅಷ್ಟು ಹೆಚ್ಚೆಚ್ಚಾಗಿ ನಿಮ್ಮ ಪಾಠದ ಕಳೆಯು ಏರುತ್ತ ಹೋಗುವದೆಂಬ ಮಾತನ್ನು ತರಬೇತಿ ಹೊಂದಿದವರಿಗೆ ಹೇಳುವದೇ ಬೇಡ. ಇತಿಹಾಸದ ಸಂಬಂಧೀಕರಣ (ಅನುಬಂಧ)ವು ಹೆಚ್ಚಾಗಿ ಸಾಮಾಜಿಕ ಚಟುವಟಿಕೆಗಳ ಮುಖಾಂತರ ಆಗುವದೆಂಬುದು ಅನುಭವದ ಮಾತಾಗಿದೆ. ಅನುಬಂಧವು ನೈಜವಾದದ್ದೂ ಸ್ವಾಭಾವಿಕವಾದದ್ದೂ ಇರಬೇಕು; ಕೃತ್ರಿಮವಾದದ್ದಿರ ಕೂಡದು.]

೧. ಕೆಳಗೆ ಕೆಲವರ ಹೆಸರುಗಳನ್ನು ಕೊಟ್ಟಿದೆ. ಅವುಗಳನ್ನು ಕಾಲಾನುಕ್ರಮವಾಗಿ ಬರೆಯಿರಿ:—

ಹೈದರಅಲಿ, ಜಕ್ಕಣಾಚಾರ್ಯ, ಹನುಮಂತ, ಅಕ್ಕಮಹಾದೇವಿ, ವೀರ ಪುಲಿಕೇಶಿ, ಕಿತ್ತೂರುಚೆನ್ನಮ್ಮ, ಮಧ್ವಾಚಾರ್ಯರು, ಕನಕದಾಸ, ವಿಕ್ರಮಾದಿತ್ಯ

೨. ಕೆಳಗೆ ಕೆಲವು ಹೆಸರುಗಳನ್ನು ಕೊಟ್ಟಿದೆ. ಪ್ರತಿಯೊಂದು ಹೆಸರಿನ ಮುಂದೆ ಅವನು ಇಲ್ಲವೆ ಅವಳು ಮಾಡಿದ ಒಂದು ನೆನಪಿನಲ್ಲಿಡತಕ್ಕ ಕಾರ್ಯವನ್ನು ಬರೆಯಿರಿ.

ಶಂಕರಾಚಾರ್ಯರು .... .... .... .... .... .... .... .... .... ....

ಹನುಮಂತನು.... .... .... .... .... .... .... .... .... ....

ಇಕ್ಕೇರಿಯ ದೊಡ್ಡ ಸಂಕಣ್ಣನು .... .... .... .... .... .... ....

ಹರಿಹರರಾಯನು .... .... .... .... .... .... .... .... ....

ಬೆಳವಡಿ ಮಲ್ಲಮ್ಮ.... .... .... .... .... .... .... .... ....

ಮುಹಮ್ಮದ ಆದಿಲಶಹ.... .... .... .... .... .... .... ....

ಚಾಮುಂಡರಾಯ .... .... .... .... .... .... .... .... ....

ಬಸವಣ್ಣನವರು .... .... .... .... .... .... .... .... ....

ಭೀಮಸೇನ........ .... .... .... .... .... .... .... .... ....

ರನ್ನ.... .... .... .... .... .... .... .... .... .... .... ....

೩. ಕೆಳಗೆ ಕೆಲವು ವಾಕ್ಯಗಳನ್ನು ಕೊಟ್ಟಿದೆ. ಅವುಗಳಲ್ಲಿ ಕೆಲವು ಸರಿ ಇವೆ, ಕೆಲವು ತಪ್ಪು ಇವೆ. ಸರಿ ಇದ್ದ ವಾಕ್ಯದ ಮುಂದೆ 'ಹೌದು'

ಎಂದು ಬರೆಯಿರಿ. ತಪ್ಪು ಇದ್ದ ವಾಕ್ಯದ ಮುಂದೆ 'ಅಲ್ಲ' ಎಂದು ಬರೆಯಿರಿ.

(ಅ) ಪುರಂದರದಾಸನು ಮೊದಲು ಬೇಡರವನಾಗಿದ್ದನು. . . . .

(ಆ) ಬೆಳವಡಿ ಮಲ್ಲಮ್ಮನು ಥ್ಯಾಕರೆಯನ್ನು ಸೋಲಿಸಿದಳು. . . . .

(ಇ) ಟೀಪುಸುಲ್ತಾನನು ದೊಡ್ಡ ಮುತ್ಸದ್ದಿಯಾಗಿದ್ದನು. . . . .

(ಈ) ಚಾಂದಬೀಬಿಯು ಹುಶೇನ ನಿಜಾಮಶಹನ ಮಗಳು . . . .

(ಉ) ಸುಗ್ರೀವನ ರಾಜಧಾನಿ ಕಿಷ್ಕಿಂದೆಯು. . . . . . . . . .

(ಊ) ಇಬ್ರಾಹಿಮ ಆದಿಲಶಹನು ಇಬ್ರಾಹಿಮರೋಜಾವನ್ನು ಕಟ್ಟಿಸಿದನು. . . . .

(ಎ) ಮಯೂರವರ್ಮನು ಚಾಲುಕ್ಯರ ಮೂಲಪುರುಷನು. . . . .

(ಏ) ವೀರ ಪುಲಿಕೇಶಿಯು ಬಾದಾಮಿಯ ಗುಡ್ಡದೊಳಗೆ ದೊಡ್ಡ ದೊಡ್ಡ ದೇವಾಲಯಗಳನ್ನು ಕೊರೆಯಿಸಿದನು.

(ಐ) ನಿಕೋಲೋ ಕೊಂಟಿ ಎಂಬ ಇಟಲಿ ದೇಶದ ಪ್ರವಾಸಿಯು ಪ್ರೌಢದೇವರಾಯನ ಓಲಗಕ್ಕೆ ಬಂದಿದ್ದನು . . . . . . .

೪. ವಾಕ್ಯದಲ್ಲಿ ಎರಡು ಭಾಗಗಳನ್ನು ಮಾಡಿ ಒಂದು ಭಾಗವನ್ನು ಒಂದು ಕೋಷ್ಟಕದಲ್ಲಿಯೂ ಮತ್ತೊಂದು ಭಾಗವನ್ನು ಮತ್ತೊಂದು ಕೋಷ್ಟಕದಲ್ಲಿಯೂ ಬರೆದಿದೆ. ಆದರೆ ಅವು ಕ್ರಮವಾಗಿ ಬರೆಯಲ್ಪಟ್ಟಿಲ್ಲ; ಹಿಂದು ಮುಂದಾಗಿ ಬರೆಯಲ್ಪಟ್ಟಿವೆ. ಅರ್ಥವಾಗುವಂತೆ ಅವುಗಳನ್ನು ಹೊಂದಿಸಿ ಒಂದೇ ವಾಕ್ಯದಲ್ಲಿ ಬರೆಯಿರಿ:—

| | |
|---|---|
| (ಅ) ತಿಪ್ಪಾಂಬಿಕೆಯು | (ಅ) ಜಕ್ಕಣಾಚಾರ್ಯನ ಮಗ. |
| (ಆ) ರಾಜಹಂಸಾಮೃತವು | (ಆ) ಟೀಪುವು. |
| (ಇ) ಆಲಿಆದಿಲಶಹನ ಹೆಂಡತಿಯು | (ಇ) ರಾಮರಾಯನ ಆನೆ. |
| (ಈ) ಈಶಪ್ರಭುವಿನ ಹೆಂಡತಿ | (ಈ) ಮಲ್ಲಸರ್ಜನ ಹೆಂಡತಿ. |
| (ಉ) ಹೈದರನ ಜನ್ಮಸ್ಥಳ | (ಉ) ಚಾಂದಬೀಬಿಯು. |
| (ಊ) ಕಿತ್ತೂರು ಚೆನ್ನಮ್ಮ | (ಊ) ಬೂದೀಕೋಟೆ. |
| (ಎ) ಮೈಸೂರಿನ ಹುಲಿ | (ಎ) ಬೆಳವಡಿ ಮಲ್ಲಮ್ಮ. |
| (ಏ) ಡಂಕಣಾಚಾರ್ಯನು | (ಏ) ಕೃಷ್ಣದೇವರಾಯನಮಲತಾಯಿ |

೫. ಕೆಳಗೆ ಕೆಲವು ಐತಿಹಾಸಿಕ ಸಂಗತಿಗಳನ್ನೂ ಇಸವಿಗಳನ್ನೂ ಕೊಟ್ಟಿದೆ. ಆಯಾ ಸಂಗತಿಯು ಮುಂದೆ ಆಯಾ ಇಸವಿಗಳನ್ನು ಬರೆಯಿರಿ:—

ಕಿತ್ತೂರಿನ ಬಂಡಾಯ; ಟೀಪು ಸುಲ್ತಾನನ ಮರಣ; ಶಿವಾಜಿಯು ಬೆಳವಡಿಯನ್ನು ಮುತ್ತಿದ್ದು; ರಕ್ಕಸಗಿ-ತಂಗಡಗಿ ಯುದ್ಧ; ವೀರಬಲ್ಲಾಳನ ಮರಣ; ಬಸವಣ್ಣನವರ ಜನ್ಮ; ವಿಜಯನಗರದ ರಾಜ್ಯಸ್ಥಾಪನೆ; ಹೈದರ ಆಲಿಯ ಜನ್ಮ; ವಿಕ್ರಮ ಸಂವತ್ಸರದ ಪ್ರಾರಂಭ.

೧೩೩; ೧೨೭೬; ೧೮೨೪; ೧೭೨೨; ೧೬೬೮; ೧೩೩೫; ೧೨೨೦; ೧೫೬೫; ೧೭೯೯.

೬. ಕೆಳಗೆ ಕೆಲವು ಐತಿಹಾಸಿಕ ಕಟ್ಟಡಗಳನ್ನೂ ಅವುಗಳನ್ನು ಕಟ್ಟಿಸಿದವರ ಹೆಸರುಗಳನ್ನೂ ಬೇರೆ ಬೇರೆಯಾಗಿ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಯಾರು ಯಾವದನ್ನು ಕಟ್ಟಿಸಿದರೆಂಬದನ್ನು ಬರೆಯಿರಿ:—

ಶ್ರವಣಬೆಳಗೊಳದ ಗೋಮಟೇಶ್ವರ; ವಿಜಾಪುರದ ಬೋಲಗುಮುಟ ಹಂಪೀ ವಿರೂಪಾಕ್ಷನ ಗುಡಿ; ಬೇಲೂರ ಚೆನ್ನಕೇಶವ ದೇವಾಲಯ; ಸಾಲೋಟಗಿ ವಿಶ್ವವಿದ್ಯಾಲಯ; ಅಜಂತೆಯ ಗವಿಯೊಳಗಿನ ಚಿತ್ರಗಳು; ಬಾದಾಮಿಯ ಗುಡ್ಡದೊಳಗೆ ಕೊರೆಯಿಸಿದ ದೇವಾಲಯಗಳು; ಹಂಪೀ ಬಸವಣ್ಣನ ಕಾಲುವೆ.

ಕೃಷ್ಣದೇವರಾಯ; ಮಂಗಲೇಶ್ವರ; ಚಾಮುಂಡರಾಯ; ವೀರಪುಲಿಕೇಶಿ; ಮುಹಮ್ಮದ ಆದಿಲಶಹ; ಮುಮ್ಮಡಿ ಕೃಷ್ಣ; ಹರಿಹರರಾಯ; ವಿಷ್ಣುವರ್ಧನ;

೭. ಕೆಳಗೆ ಕೆಲವು ಪಂಡಿತರ ಹೆಸರುಗಳನ್ನೂ ಅವರು ಯಾವ ಅರಸನ ಓಲಗದಲ್ಲಿದ್ದರೋ ಆ ಅರಸರ ಹೆಸರುಗಳನ್ನೂ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಯಾರು ಯಾರ ಓಲಗದಲ್ಲಿದ್ದರೆಂಬದನ್ನು ಬರೆಯಿರಿ:—

ತೆನ್ನಾಲ ರಾಮಕೃಷ್ಣ; ವಿದ್ಯಾರಣ್ಯ; ಬಿಲ್ಹಣ; ರನ್ನ; ಪೊನ್ನ, ಸಾಯಣಾಚಾರ್ಯ; ಲಕ್ಕಣ್ಣ-ದಂಡೇಶ; ನಾಗಚಂದ್ರ; ಆದಿಪಂಪ.

ಪ್ರೌಢದೇವರಾಯ; ಕೃಷ್ಣದೇವರಾಯ; ವಿಷ್ಣುವರ್ಧನ; ವಿಕ್ರಮಾದಿತ್ಯ; ತೈಲಪ; ಬುಕ್ಕರಾಯ; ಮುಮ್ಮಡಿ ಕೃಷ್ಣ; ಹರಿಹರರಾಯ; ಅರಿಕೇಸರಿ.

೮. ಕೆಳಗೆ ಕೆಲವು ಜನ್ಮಸ್ಥಳಗಳನ್ನೂ ಅಲ್ಲಿ ಹುಟ್ಟಿದವರ ಹೆಸರುಗಳನ್ನೂ ಬೇರೆ ಬೇರೆಯಾಗಿ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಅವರವರ ಹೆಸರಿನ ಮುಂದೆ ಅವರವರ ಜನ್ಮಸ್ಥಳಗಳನ್ನು ಬರೆಯಿರಿ—

ದೇವನಹಳ್ಳಿ; ಕಾಲಟಿ; ಬಾಗೇವಾಡಿ; ಕೈದಾಳ; ಉಡುತಡಿ; ಬೂದೀಕೋಟೆ; ಆನೇಗುಂದಿ; ಪಾಜಕ; ಬಾಡ.

ಹೈದರಲಿ; ವಿದ್ಯಾರಣ್ಯ; ಕನಕದಾಸ; ಮಧ್ವಾಚಾರ್ಯ; ಟೀಪುಸುಲ್ತಾನ; ಶಂಕರಾಚಾರ್ಯ; ಬಸವೇಶ್ವರ; ಜಕ್ಕಣಾಚಾರ್ಯ; ಅಕ್ಕಮಹಾದೇವಿ.

೯. ಕೆಳಗೆ ಕೆಲವು ಹೇಳಿಕೆಗಳನ್ನೂ ಅವುಗಳನ್ನು ಅಂದವರ ಹೆಸರುಗಳನ್ನೂ ಬೇರೆ ಬೇರೆಯಾಗಿ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಯಾರು ಯಾವ ಮಾತನ್ನು ಅಂದರೆಂಬದನ್ನು ಬರೆಯಿರಿ: —

(ಅ) ಮೊಸಳೆಯು ನನ್ನ ಕಾಲನ್ನು ಹಿಡಿದಿದೆ. ನನಗೆ ಸನ್ಯಾಸಿಯಾಗಲು ಒಪ್ಪಿಗೆ ಕೊಟ್ಟರೆ, ಅದು ಬಿಡುವದು. (ಆ) ಈ ಮೂರ್ತಿಯ ಕಲ್ಲು ಅಶುಚಿಯೆಂದು ತೋರಿಸಿಕೊಟ್ಟರೆ, ನನ್ನ ಬಲಗೈಯನ್ನೇ ಕಡಿದುಕೊಳ್ಳುವೆನು. (ಇ) ದಯವಿಲ್ಲದ ಧರ್ಮವಾವುದಯ್ಯ; ದಯವೇ ಧರ್ಮದ ಮೂಲವಯ್ಯ. (ಈ) ಮುಸಲ್ಮಾನರ ಹಾವಳಿಯನ್ನು ತಡೆಯಲು ಒಂದು ಬಲವಾದ ಹಿಂದೂ ರಾಜ್ಯವನ್ನು ಸ್ಥಾಪಿಸಬೇಕೆಂದು ನಮ್ಮ ಹೆಬ್ಬಯಕೆ. (ಉ) ವಿಜಯನಗರಕ್ಕೆ ಏಳು ಸುತ್ತಿನ ಕೋಟೆಯಿದ್ದು, ಏಳನೆಯ ಕೋಟೆಯಲ್ಲಿ ಅರಮನೆಯಿದೆ. (ಊ) ಜನರು ಪ್ರಾಮಾಣಿಕರು; ಸ್ವಾಭಿಮಾನಿಗಳು; ಮುಯ್ಯಕ್ಕೆ ಮುಯ್ಯ ತೀರಿಸುವವರು (ಎ) ಹೊಯ್; ಸಳ !

[ಅ] ಸುದತ್ತಮುನಿ. [ಆ] ಶಂಕರಾಚಾರ್ಯ. [ಇ] ಜಕ್ಕಣಾಚಾರ್ಯ. [ಈ] ಬಸವೇಶ್ವರ. [ಉ] ಹರಿಹರರಾಯ. (ಹುಕ್ಕ) (ಊ] ನಿಕೋಲೋ ಕೊಂಟಿ ಮತ್ತು ಅಬ್ದುಲ್‌ರಝಾಕ. [ಎ] ಹುವೆನ್‌ತ್ಸಾಂಗ.

೧೦. ಕೆಳಗೆ ಕೆಲವರ ಹೆಸರುಗಳನ್ನೂ ಅವರಿಗೆ ಸಿಕ್ಕ ಬಿರುದುಗಳನ್ನೂ ಬೇರೆ ಬೇರೆಯಾಗಿ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಅವರವರ ಹೆಸರಿನ ಮುಂದೆ ಅವರವರ ಬಿರುದನ್ನು ಬರೆಯಿರಿ:—

ಕನ್ನಡ ರಾಜ್ಯ ರಮಾರಮಣ, ಮೈಸೂರಿನ ಹುಲಿ; ಪರಮೇಶ್ವರ; ಕವಿಚಕ್ರವರ್ತಿ; ಕರ್ನಾಟಕದ ಚಕ್ರವರ್ತಿ; ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ.

ಟೀಪುಸುಲ್ತಾನ; ವಿದ್ಯಾರಣ್ಯ; ಕೃಷ್ಣದೇವರಾಯ; ವೀರಪುಲಿಕೇಶಿ; ವೀರಬಲ್ಲಾಳ; ರನ್ನ.

೮೬೨೭೦

# ಮುಖ್ಯ ಇಸವಿಗಳ ಪಟ್ಟಿ

ಕ್ರಿ.ಶ.ಪೂ. ೨೯೮ ಚಂದ್ರಗುಪ್ತನ ಮರಣ
ಕ್ರಿ.ಶ. ೭೮೮ ಶ್ರೀ ಶಂಕರಾಚಾರ್ಯರ ಜನ್ಮ
,, ೩೦೦ ಕದಂಬರ ರಾಜ್ಯ ಸ್ಥಾಪನೆ
,, ೬೦೯ ೨ನೇ ಪುಲಿಕೇಶಿಯ ಪಟ್ಟ
,, ೬೪೧ ಚೀನಿ ಪ್ರವಾಸಿಯು ಕರ್ನಾಟಕಕ್ಕೆ ಬಂದದ್ದು
,, ೭೫೨ ದಂತಿದುರ್ಗನು ಚಕ್ರವರ್ತಿಯಾದದ್ದು
,, ೭೯೪-೮೧೪ ವೀರಗೋವಿಂದನ ಆಳಿಕೆ
,, ೯೪೧ ಆದಿಪಂಪನು ಭಾರತ ರಚಿಸಿದ್ದು
,, ೯೭೩ ತೈಲಪನು ಚಕ್ರವರ್ತಿಯಾದದ್ದು
,, ೧೦೭೬ ಯಾತಗಿರಿಯಲ್ಲಿ ವಿಕ್ರಮಾದಿತ್ಯನ ಪಟ್ಟ
,, ೧೧೩೧ ಶ್ರೀ ಬಸವಣ್ಣನವರ ಜನ್ಮ
,, ೧೧೫೬ ಬಿಜ್ಜಳನು ಪಟ್ಟಕ್ಕೆ ಕುಳಿತದ್ದು
,, ೧೧೬೮ ಬಸವಣ್ಣನವರು ಐಕ್ಯರಾದದ್ದು
,, ೧೧೯೧ ಇಮ್ಮಡಿ ಬಲ್ಲಾಳನು ಭಿಲ್ಲಮನನ್ನು ಸೋಲಿಸಿದ್ದು
,, ೧೧೯೯ ಶ್ರೀ ಮಧ್ವಾಚಾರ್ಯರ ಜನ್ಮ
,, ೧೨೯೪ ಅಲ್ಲಾವುದ್ದೀನನು ದೇವಗಿರಿ ಮುತ್ತಿದ್ದು
,, ೧೩೧೧ ಮಲಿಕ ಕಾಫುರನ ದಾಳಿ
,, ೧೩೩೬ ವಿಜಯನಗರ ರಾಜ್ಯಸ್ಥಾಪನೆ
,, ೧೩೩೬ ಹರಿಹರರಾಯನಿಗೆ ಪಟ್ಟ
,, ೧೩೪೦ ಹರಿಹರನು ಬಾದಾಮಿ ಕೋಟೆ ಕಟ್ಟಿಸಿದ್ದು
,, ೧೩೪೭ ಬಹಮನಿ ರಾಜ್ಯಸ್ಥಾಪನೆ

ಕ್ರಿ.ಶ. ೧೩೮೬ ಶ್ರೀ ವಿದ್ಯಾರಣ್ಯರ ಸಮಾಧಿ
,, ೧೩೯೬ ದುರ್ಗಾದೇವಿಯ ಬರಗಾಲ
,, ೧೪೮೯ ಆದಿಲಶಾಹಿ ರಾಜ್ಯಸ್ಥಾಪನೆ
,, ೧೫೨೬ ಬಹಮನಿ ರಾಜ್ಯದಲ್ಲಿ ಒಡಕು
,, ೧೫೬೫ ರಕ್ಕಸಗಿ ತಂಗಡಗಿಯ ಕಾಳಗ
,, ೧೬೨೭ ಶಿವಾಜಿಯ ಜನ್ಮ
,, ೧೬೭೮ ಬೆಳವಡಿ ಮಲ್ಲಮ್ಮನೊಡನೆ ಯುದ್ಧ
,, ೧೬೭೪ ಅಕ್ಕಣ್ಣ-ಮಾದಣ್ಣರ ಕೊಲೆ
,, ೧೬೮೦ ಶಿವಾಜಿಯ ಮರಣ
,, ೧೭೦೭ ಕೊಲ್ಲಾಪುರ ರಾಜ್ಯ ಸ್ಥಾಪನೆ
,, ೧೭೧೩ ಪೇಶವೆಯರ ಕೈಗೆ ರಾಜ್ಯ
,, ೧೭೨೨ ಹೈದರಅಲಿಯ ಜನ್ಮ
,, ೧೭೩೪ ಜಾಯಪ್ಪ ದೇಸಾಯಿಯು ಸವದತ್ತಿ ಕೋಟೆ ಕಟ್ಟಿಸಿದ್ದು
,, ೧೭೫೩ ಟೀಪುಸುಲ್ತಾನನ ಜನ್ಮ
,, ೧೭೬೧ ಹೈದರಅಲಿಯು ಅರಸನಾದದ್ದು
,, ೧೭೭೩ ನಾರಾಯಣರಾಯನ ಕೊಲೆ
,, ೧೭೭೭ ಟೀಪುಸುಲ್ತಾನನು ಧಾರವಾಡ ಸುಲಿದದ್ದು
,, ೧೭೮೨ ಹೈದರಅಲಿಯ ಮರಣ
,, ೧೭೯೯ ಟೀಪುಸುಲ್ತಾನನ ಮರಣ
,, ೧೮೦೦ ಧುಂಡಜಿಯ ಮರಣ
,, ೧೮೦೯ ವೀರರಾಜೇಂದ್ರನ ಮರಣ
,, ೧೮೧೮ ಪೇಶವೆಯರ ಆಳಿಗಾಲ
,, ೧೮೨೪ ಕಿತ್ತೂರಿನ ಬಂಡಾಯ
,, ೧೮೫೮ ನರಗುಂದ ಬಂಡಾಯ

ಮರಣೆ ಮರುಗಿದನು. ದೇವರಿಗೆ ಮೊರೆಯಿಟ್ಟನು. ಅಂತಹದರಲ್ಲಿಯೆ ಅವನ ಮೊದಲಿನ ಹೆಂಡತಿ ತೀರಿಕೊಂಡಳು. ಅವಳ ತರುವಾಯ ಒಬ್ಬ ಮಗನೂ ಸತ್ತನು. ಇದರಿಂದ ತುಕಾರಾಮನಿಗೆ ಬಹಳ ಕಷ್ಟವಾಯಿತು.

ಮುಂದೆ ತುಕಾರಾಮನಿಗೆ ಪ್ರಪಂಚದ ಕಡೆಗೆ ಆಶೆಯೇ ಉಳಿಯಲಿಲ್ಲ. ತನ್ನ ಸಂಸಾರದ ಎಲ್ಲ ಭಾರವನ್ನೂ ಭಗವಂತನ ಮೇಲೆ ಹಾಕಿ ದೇವರ ಧ್ಯಾನದಲ್ಲಿ ಕಾಲಕಳೆಯಲು ನಿಶ್ಚಯ ಮಾಡಿದನು. ಮನೆಯಲ್ಲಿ ಹೆಚ್ಚಿನ ಆಸ್ತಿಯೇನೂ ಇರಲಿಲ್ಲ. ಜನರ ಕಡೆಯಿಂದ ಬರಬೇಕಾದ ಹಣದ ಲೆಕ್ಕ-ಪತ್ರಗಳು ಮಾತ್ರ ಇದ್ದುವು. ಅವುಗಳಲ್ಲಿ ತಮ್ಮನ ಪಾಲಿಗೆ ಕೆಲವು ಲೆಕ್ಕ ಪತ್ರಗಳನ್ನು ಕೊಟ್ಟು, ತನ್ನ ಪಾಲಿಗೆ ಬಂದವುಗಳನ್ನೆಲ್ಲ ಇಂದ್ರಾಯಣಿ ನದಿಯಲ್ಲಿ ಮುಳುಗಿಸಿಬಿಟ್ಟನು. ಜನರಿಗೆ ತೊಂದರೆ ಕೊಟ್ಟು ಅವರಿಂದ ಹಣವನ್ನು ವಸೂಲು ಮಾಡುವುದು ಅವನಿಗೆ ಬೇಕಾಗಿರಲಿಲ್ಲ.

ಈಗ ತುಕಾರಾಮನಿಗೆ ಯಾವ ತರದ ಚಿಂತೆಯೂ ಇರಲಿಲ್ಲ. ದೇವರ ಭಜನೆ, ಕೀರ್ತನೆ ಹಾಗು ಧ್ಯಾನಗಳಲ್ಲಿ ಎಲ್ಲ ವೇಳೆಯನ್ನು ಕಳೆಯುವನು. ಬೆಳಗಿನ ಕಾರ್ಯಗಳನ್ನು ತೀರಿಸಿಕೊಂಡು ವಿಠ್ಠಲಮಂದಿರಕ್ಕೆ ಹೋಗುವನು. ಅಲ್ಲಿ ಪೂಜೆ-ಪುರಸ್ಕಾರಗಳನ್ನು ತೀರಿಸಿಕೊಳ್ಳುವನು. ಬಳಿಕ ನದಿಯ ಆಚೆಗೆ ಇರುವ ಗುಡ್ಡದ ಶಿಖರಗಳಿಗೆ ಹೋಗಿ, ಅಲ್ಲಿ ಸಂಜೆಯವರೆಗೆ ಜ್ಞಾನೇಶ್ವರ, ನಾಮದೇವ ಇವರ ಅಭಂಗಗಳನ್ನು ಹೇಳುತ್ತ ಕುಳಿತುಕೊಳ್ಳುವನು. ಸಂಜೆ-ಯಾಗುತ್ತಲೆ ಎದ್ದು ಮನೆಗೆ ಬಂದು ಹರಿಕೀರ್ತನವನ್ನು ಮಾಡುವನು. ಅವನ ಕೀರ್ತನವನ್ನು ಕೇಳಲು ಬಹಳ ಜನರು ಬರುತ್ತಿದ್ದರು. ಅವನ ಬಾಯಿಂದ ಸುಂದರವಾದ 'ಅಭಂಗ'ಗಳು ಹೊರಡಹತ್ತಿದುವು. ವೇದ-ವೇದಾಂತದ ಅರ್ಥವೆಲ್ಲ ಆ ಅಭಂಗಗಳಲ್ಲಿ ತುಂಬಿರುತ್ತಿತ್ತು. ದೊಡ್ಡ ದೊಡ್ಡ ಜನರೂ ಪಂಡಿತರೂ ತುಕಾರಾಮನ ಅಭಂಗಗಳನ್ನು ಕೇಳಿ ಅವನನ್ನು ಕೊಂಡಾಡ-ಹತ್ತಿದರು.

ಸಂಪ್ರದಾಯದಂತೆ ನಡೆದುಕೊಳ್ಳಬೇಕು ಎನ್ನುವ ಬ್ರಾಹ್ಮಣರಿಗೆ ತುಕಾ-ರಾಮನ ಈ ರೀತಿ ಸೇರಲಿಲ್ಲ. ವೈಶ್ಯನ ಬಾಯಿಂದ ನೀತಿ ಹಾಗು ಧರ್ಮಬೋಧಕ ವಾದ ಅಭಂಗಗಳನ್ನು ಕೇಳುವುದು ಅಧರ್ಮವೆಂದು ಅವರು ಹೇಳಹತ್ತಿದರು. ಅಲ್ಲದೆ ತುಕಾರಾಮನನ್ನು ಊರುಬಿಟ್ಟು ಓಡಿಸಲು ಯತ್ನಿಸಹತ್ತಿದರು. ಅವರೆಲ್ಲರೂ ಊರ ಮುಖ್ಯಸ್ಥನಿಗೆ ಹೇಳಿ ತುಕಾರಾಮನು ಮುಂದೆ ಅಭಂಗ-ಗಳನ್ನು ಬರೆಯದಂತೆ ಆಜ್ಞೆ ಮಾಡಿಸಿದರು. ಅಲ್ಲದೆ ಅಲ್ಲಿಯವರೆಗೆ ಬರೆದ ಎಲ್ಲ ಅಭಂಗಗಳನ್ನೂ ಗಂಟುಕಟ್ಟಿ ಇಂದ್ರಾಯಣೀ ನದಿಯಲ್ಲಿ ಮುಳುಗಿಸಿ-ದರು. ಇದರಿಂದ ತುಕಾರಾಮನಿಗೆ ಅತ್ಯಂತ ದುಃಖವಾಯಿತು. ಅವನು

ಹದಿಮೂರು ದಿನಗಳವರೆಗೆ ಅನ್ನ-ನೀರುಗಳನ್ನು ತೊರೆದು ದೇವರ ಧ್ಯಾನದಲ್ಲಿ ನಿರತನಾದನು. ದೇವರು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದನಂತೆ. ಆ ಅಭಂಗದ ಗಂಟನ್ನು ತಿರುಗಿ ತಂದುಕೊಟ್ಟನಂತೆ. ಇದರಿಂದ ತುಕಾರಾಮನ ಕೀರ್ತಿ ಎಲ್ಲ ಕಡೆಗೆ ಹಬ್ಬಿತು. ಅವನ ವೈರಿಗಳು ಕೂಡ ಅವನಿಗೆ ಶರಣಾಗತರಾದರು.

ತುಕಾರಾಮನ ಕೀರ್ತಿಯನ್ನು ಕೇಳಿ ಶಿವಾಜೀ ಮಹಾರಾಜನು ಅವನ ದರ್ಶನಕ್ಕೆ ಬಂದನು. ಆತನ ಭಗವದ್ಭಕ್ತಿ ಹಾಗು ಕೀರ್ತನೆಗೆ ಮೆಚ್ಚಿ ಅವನನ್ನು ಮನಸಾರೆ ಕೊಂಡಾಡಿದನು. ತುಕಾರಾಮನು ಜನರಿಗೆ ಸುಲಭವಾಗಿ ತಿಳಿಯುವಂತೆ, ಅವರ ಭಾಷೆಯಲ್ಲಿಯೆ ಹರಿಭಜನ-ಹರಿಕೀರ್ತನೆಗಳನ್ನು ಮಾಡುತ್ತ ಮಹಾರಾಷ್ಟ್ರದಲ್ಲೆಲ್ಲ ಸುತ್ತಾಡಿದನು, ಅಲ್ಲದೆ ಅಲ್ಲಲ್ಲಿ ಕೆಲವು ಚಮತ್ಕಾರಗಳನ್ನೂ ಮಾಡಿತೋರಿಸಿದನು. ಹೀಗೆ ದೇವರ ನಾಮ ಸಂಕೀರ್ತನೆಯನ್ನು ಮಾಡುತ್ತ ಆನಂದದಿಂದ ಕುಣಿದಾಡುತ್ತಿರುವಾಗ ಒಂದು ದಿನ ದೇವಲೋಕದಿಂದ ಬಂದ ವಿಮಾನದಲ್ಲಿ ಕುಳಿತು ತುಕಾರಾಮನು ವೈಕುಂಠಕ್ಕೆ ಹೋದನಂತೆ.

## ಅಭ್ಯಾಸನಗಳು

೧. ತುಕಾರಾಮನು ಹುಟ್ಟಿದ ಊರು ಯಾವುದು?

೨. ಇವನ ತಂದೆಯು ಯಾವ ಉದ್ಯೋಗವನ್ನು ಮಾಡುತ್ತಿದ್ದನು?

೩. ಇವನು ಯಾವ ಯಾವ ವ್ಯಾಪಾರಗಳನ್ನು ಮಾಡಿದನು?

೪. ವ್ಯಾಪಾರದಲ್ಲಿ ಇವನನ್ನು ರಕ್ಕಜನರು ಹೇಗೆ ಮೋಸಗೊಳಿಸಿದರು?

೫. ಕರ್ಮನಿಷ್ಠ ಬ್ರಾಹ್ಮಣರು ಇವನಿಗೆ ಯಾವ ರೀತಿಯಿಂದ ಪೀಡಿಸಿದರು?

೬. ತುಕಾರಾಮನ ದರ್ಶನಕ್ಕೆ ಯಾರು ಬಂದರು?

೭. ತುಕಾರಾಮನ ಅಂತ್ಯವು ಹೇಗಾಯಿತೆಂದು ಜನರು ಹೇಳುತ್ತಾರೆ?

೮. ತುಕಾರಾಮನ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

## ೩೦. ಛತ್ರಪತಿ ಶಿವಾಜಿ

ದಿಲ್ಲಿಯಲ್ಲಿ ಮೊಗಲಬಾದಶಹ ಜಹಾಂಗೀರನು ರಾಜ್ಯವಾಳುತ್ತಿದ್ದನು. ದಕ್ಷಿಣದಲ್ಲಿಯೂ ಬೇರೆ ಬೇರೆ ಮುಸಲ್ಮಾನ ಅರಸರ ಆಳಿಕೆಯೇ ನಡೆದಿತ್ತು. ವಿಜಯನಗರದ ಸಾಮ್ರಾಜ್ಯವು ಹಾಳಾಗಿ ಹೋಗಿತ್ತು. ಆಗ ಭಾರತದ ತುಂಬೆಲ್ಲ ಮುಸಲ್ಮಾನರ ಅಧಿಕಾರವೇ ಅಧಿಕಾರ! ಹಿಂದುಗಳನ್ನು ಯಾರೂ ಕೇಳುತ್ತಿದ್ದಿಲ್ಲ. ಹಿಂದು ಧರ್ಮ-ಮತಗಳಿಗೆ ಸರಿಯಾದ ಸಂರಕ್ಷಣೆಯಿರಲಿಲ್ಲ. ಇಂತಹ ಸಮಯದಲ್ಲಿ, ಹಿಂದುಧರ್ಮದ ಸಂರಕ್ಷಣೆಯ ಗುರಿಯನ್ನಿಟ್ಟುಕೊಂಡು ಹಿಂದುರಾಜ್ಯವನ್ನು ಕಟ್ಟಿದವನು ಶಿವಾಜಿ ಮಹಾರಾಜನು

ಶಿವಾಜಿಯು ಭೋಸಲೆ ಮನೆತನದವನು. ಇವನ ತಂದೆ ಶಹಾಜಿ ಭೋಸಲೆ, ತಾಯಿ ಜೀಜಾಬಾಯಿ. ಶಹಾಜಿಯು ಪುಣೆಯ ಬಳಿ ಒಂದು ಸಣ್ಣ ಜಹಗೀರಿನ ಒಡೆಯನಾಗಿದ್ದನು. ಆದರೂ ಅವನು ಕೆಲವು ಕಾಲ ಅಹಮ್ಮದನಗರದ ಬಾದಶಹರಲ್ಲಿ ನೌಕರಿ ಮಾಡುತ್ತಿದ್ದನು, ಆ ಮೇಲೆ ವಿಜಾಪುರ ಬಾದಶಹರ ಸೈನ್ಯದಲ್ಲಿ ಅಧಿಕಾರಿಯಾಗಿದ್ದನು. ಶಹಾಜಿಯು ತನ್ನ ಹೆಂಡತಿ ಜೀಜಾಬಾಯಿಯನ್ನು ಶಿವನೇರಿ ಕೋಟೆಯಲ್ಲಿ ಇರಿಸಿ, ತಾನೊಬ್ಬನೇ ವಿಜಾಪುರದಲ್ಲಿ ಇರುತ್ತಿದ್ದನು. ಈ ದಂಪತಿಗಳ ಹೊಟ್ಟೆಯಿಂದ ಶಿವಾಜಿಯು ಕ್ರಿ. ಶ. ೧೬೨೭ರಲ್ಲಿ ಹುಟ್ಟಿದನು. ಅವನು ಹುಟ್ಟಿದುದು ಶಿವನೇರಿಯಲ್ಲಿಯೆ ಅದು ಶಹಾಜಿಯ ಜಹಗೀರಿನ ಊರು.

ಚಿಕ್ಕ ವಯಸ್ಸಿನಲ್ಲಿಯೆ ಶಿವಾಜಿಗೆ ಜೀಜಾಬಾಯಿಯಿಂದ ಒಳ್ಳೆಯ ಶಿಕ್ಷಣವು ದೊರೆಯಿತು. ಅವಳು ಚಿಕ್ಕ ಶಿವಾಜಿಗೆ ರಾಮಾಯಣ-ಮಹಾಭಾರತಗಳಲ್ಲಿಯ ವೀರಪುರುಷರ ಕತೆಗಳನ್ನು ಹೇಳುತ್ತಿದ್ದಳು. ಕತೆಗಳನ್ನು ಕೇಳಿ ಆ ಬಾಲಕನು, ತಾನೂ ಅವರಂತೆ ವೀರನಾಗಬೇಕೆಂದು ಇಚ್ಛಿಸುತ್ತಿದ್ದನು. ಅವನು ಗುರು-ಹಿರಿಯರ ಮಾತುಗಳನ್ನು ಎಂದೂ ಮೀರುತ್ತಿರಲಿಲ್ಲ. ದೇವರಲ್ಲಿ ಭಕ್ತಿಯುಳ್ಳವನಾಗಿದ್ದನು. ನಿತ್ಯವೂ ತಾಯಿಯೊಡನೆ ದೇವರಿಗೆ ಹೋಗಿ ಬರುತ್ತಿದ್ದನು. ಕುಲದೇವತೆಯಾದ ಅಂಬಾಭವಾನಿಯಲ್ಲಿ ಶಿವಾಜಿಗೆ ಬಹಳ ಭಕ್ತಿ-ವಿಶ್ವಾಸ.

ತಾಯಿಯ ಕೈದುತ್ತಿನೊಂದಿಗೆ ಶಿವಾಜಿಗೆ ಒಳ್ಳೆಯ ಶಿಕ್ಷಣವೇ ದೊರೆಯಿತು. ಆದರೂ ಅವನಿಗೆ ಉಳಿದ ವಿಷಯಗಳನ್ನು ಕಲಿಸಲು ಶಹಾಜಿಯು, ದಾದಾಜಿಕೊಂಡದೇವ ಎಂಬವನನ್ನು ನೇಮಿಸಿದನು. ಕೊಂಡದೇವನು ಶಿವಾಜಿಗೆ ಕುದುರೆ ಹತ್ತುವುದನ್ನೂ, ಕತ್ತಿ ತಿರುವುವುದನ್ನೂ, ದಾಂಡಪಟ್ಟಿ

ಆಡುವುದನ್ನೂ ಕಲಿಸಿದನು. ಅದರೊಂದಿಗೆ ಒದು-ಬರೆಹಗಳನ್ನೂ ರಾಜ್ಯ-ಭಾರದ ರೀತಿಯನ್ನೂ ಹೇಳುತ್ತಿದ್ದನು.

ಚಿಕ್ಕತನದಿಂದಲೂ ಶಿವಾಜಿಯಲ್ಲಿ ಸ್ವಾಭಿಮಾನವೂ ಹಿಂದುಧರ್ಮದ ಬಗೆಗೆ ಪ್ರೇಮವೂ ತುಂಬಿತುಳುಕುತ್ತಿದ್ದುವು. ಒಂದು ಸಲ ಬಾಲಕ ಶಿವಾಜಿಯು ತಂದೆಯೊಡನೆ ವಿಜಾಪುರಕ್ಕೆ ಹೋದಾಗ ಕಟುಕರು ಆಕಳನ್ನು ಕೊಲ್ಲುತ್ತಿರುವುದನ್ನು ನೋಡಿದನು. ಆಕಳೆಂದರೆ ಪವಿತ್ರದೇವತೆಯೆಂದು ಶಿವಾಜಿಯು ಭಾವಿಸಿದ್ದನು. ಆದುದರಿಂದ ಅವನು ಕಟುಕರೊಡನೆ ಜಗಳ-ವಾಡಿ, ಕೊಲ್ಲುತ್ತಿದ್ದ ಆಕಳನ್ನು ಬಿಡಿಸಿದನು. ದರ್ಬಾರಿಗೆ ಹೋದಾಗ, ಬಾದಶಹನನ್ನು ನಮಸ್ಕರಿಸಲು ತಂದೆಯು ಶಿವಾಜಿಗೆ ಹೇಳಿದನು. ಸ್ವಾಭಿ-ಮಾನಿಯಾದ ಶಿವಾಜಿಯು ಅದಕ್ಕೆ ಒಪ್ಪಲಿಲ್ಲ. 'ಅನ್ಯಧರ್ಮದ ರಾಜನನ್ನು ನಾನೆಂದೂ ಮನ್ನಿಸಲಾರೆ' ಎಂದು ಖಂಡಿತವಾಗಿ ಹೇಳಿದನು. ಶಿವಾಜಿಯ ಈ ವರ್ತನವು ಬಾದಶಹನಿಗೆ ಸಹನವಾಗಲಿಲ್ಲ. ಅವನು ತುಂಬ ಕೋಪ-ಗೊಂಡನು. ಇದರಿಂದ ಶಹಾಜಿಯು ಶಿವಾಜಿಯನ್ನು ತಿರುಗಿ ಶಿವನೇರಿಗೆ ಕಳುಹಬೇಕಾಯಿತು.



ವಿಜಯಯಾತ್ರೆಗೆ ಹೊರಟ ಶಿವಾಜಿಯು

ಅಲ್ಲಿ ಶಿವಾಜಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ತನ್ನ ಜನರ ಸ್ಥಿತಿಗತಿ-ಗಳನ್ನು ನೋಡಿದನು. "ನಾವಿನ್ನು ಮುಸಲ್ಮಾನರ ಅಧೀನದಲ್ಲಿರಬಾರದು. ನಮ್ಮ ಸ್ವತಂತ್ರರಾಜ್ಯವನ್ನು ಕಟ್ಟಬೇಕು. ಹಿಂದುಧರ್ಮವನ್ನು ಸಂರಕ್ಷಿಸಬೇಕು"

ಎಂದು ನಿಶ್ಚಯಮಾಡಿದನು. ತನ್ನ ಬಾಲ್ಯದ ಗೆಳೆಯರನ್ನೆಲ್ಲ ಕೂಡಿಸಿದನು. ಅವರೆಲ್ಲರಿಗೆ ಶಿವಾಜಿಯಲ್ಲಿ ತುಂಬ ವಿಶ್ವಾಸ. ಅವನು ಹೇಳಿದ ಕೆಲಸಗಳನ್ನು ಮಾಡಲು ಅವರು ಸಿದ್ಧರಾದರು. ಶಿವಾಜಿಯು ಸುತ್ತುಮುತ್ತಲಿನ ಗುಡ್ಡ-ಗಾಡಿನಲ್ಲಿ ಸುತ್ತಾಡಿದನು. ಅಲ್ಲಿಯ ದಾರಿಗಳನ್ನೂ ಕೋಟೆ-ಕಂದರಗಳನ್ನೂ ನೋಡಿಕೊಂಡನು. ಅಲ್ಲಿ ವಾಸಿಸುವ ಮಾವಳೆಜನರ ದಂಡನ್ನು ಕೂಡಿಸಿದನು ಈ ದಂಡಿನ ಸಹಾಯದಿಂದ, ಆ ಗುಡ್ಡಗಾಡಿನಲ್ಲಿರುವ ಕೋಟೆಗಳನ್ನು ಒಂದೊಂದಾಗಿ ವಶಪಡಿಸಿಕೊಂಡನು. ಅಲ್ಲಲ್ಲಿಗೆ ದಂಡನ್ನು ಇಟ್ಟು ಕೋಟೆಗಳನ್ನು ಬಲಪಡಿಸಿದನು. ಬಳಿಕ ಹಳ್ಳಿ-ಪಟ್ಟಣಗಳನ್ನು ಗೆದ್ದುಕೊಳ್ಳಲಿಕ್ಕೆ ಪ್ರಾರಂಭಿಸಿದನು.

ಆಗ ವಿಜಾಪುರದ ಸುಲ್ತಾನನು ಕಣ್ಣುತೆರೆದನು. ಶಿವಾಜಿಯ ಸದ್ದನ್ನು ಅಡಗಿಸಬೇಕೆಂದು ಅವನು ಬಹಳ ಪ್ರಯತ್ನಪಟ್ಟನು, ಆದರೆ ಹಂಚಿಕೆಗಾರ-ನಾದ ಶಿವಾಜಿಯು ಅವನಿಗೆ ಮಣಿಯಲಿಲ್ಲ. ತಾನಾಜಿ ಮಾಲುಸುರೆ, ಏಸಾಜಿ ಕಂಕ, ನೇತಾಜಿ ಪಾಲಕರ, ಬಾಜಿ ಪ್ರಭು ಪಾಲಸ್ಕರ ಮುಂತಾದ—ಜೀವಕ್ಕೆ ಜೀವ ಕೊಡುವ—ವೀರರ ಸಹಾಯದಿಂದ ತೋರಣಗಡ. ಸಿಂಹಗಡ, ಪುರಂದರಗಡ ಪ್ರತಾಪಗಡ ಮುಂತಾದ ಕೋಟೆಗಳನ್ನು ಗೆದ್ದುಕೊಂಡನು ಹೊಸತಾಗಿ ರಾಯಗಡ ಎಂಬ ಭದ್ರವಾದ ಕೋಟೆಯನ್ನು ಕಟ್ಟಿಸಿ, ಅದನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡನು.

ಶಿವಾಜಿಯ ಏರಾಟವನ್ನು ಕಂಡು, ವಿಜಾಪುರದ ಸುಲ್ತಾನನು ಸಂತಾಪಗೊಂಡನು. ಆತನ ಪರಾಕ್ರಮದ ಚಟುವಟಿಕೆಗಳನ್ನು ತಗ್ಗಿಸಬೇಕೆಂದು ಸುಲ್ತಾನನು ಆಗಾಗ ಸೈನ್ಯದೊಂದಿಗೆ ಬೇರೆ ಬೇರೆ ಸರದಾರರನ್ನು ಕಳುಹಿದನು. ಆದರೆ ಅವರೆಲ್ಲ ಶಿವಾಜಿಯಿಂದ ಒಂದಿಲ್ಲೊಂದು ಬಗೆಯ ಏಟನ್ನು ತಿಂದು, ಅಪಜಯಕ್ಕೆ ಈಡಾಗಿ ಹಿಂದಿರುಗಬೇಕಾಯಿತು. ಇದರಿಂದ ನಿರಾಶೆಗೊಂಡ ಸುಲ್ತಾನನು ಮುಂದೆ ಶಿವಾಜಿಯ ಗೋಜಿಗೆ ಬರುವದನ್ನೇ ಬಿಟ್ಟುಬಿಟ್ಟನು.

ಬರುಬರುತ್ತ ಶಿವಾಜಿಯು ಮೊಗಲರ ರಾಜ್ಯವನ್ನು ಹೊಕ್ಕು ಅಲ್ಲಿ ಉಪಟಳ ನಡೆಸಿದನು. ಅದನ್ನು ಕಂಡು ಔರಂಗಜೇಬನಿಗೆ ಸಿಟ್ಟುಬಂದಿತು. ಅವನು ಶಿವಾಜಿಯನ್ನು ಹಿಡಿತರಬೇಕೆಂದು ಅಪ್ಪಣೆಕೊಟ್ಟು, ಶಾಹಿಸ್ತೇಖಾನ-ನೆಂಬ ಸರದಾರನನ್ನು ಕಳುಹಿದನು. ಖಾನನು ಪುಣೆಗೆ ಬಂದು ಬೀಡುಬಿಟ್ಟನು. ಶಿವಾಜಿಯು ನಿಬ್ಬಣದ ಜನರ ಸೋಗಿನಲ್ಲಿ ತನ್ನ ವಿಶ್ವಾಸದ ಸೈನಿಕರೊಂದಿಗೆ ಪುಣೆಯಲ್ಲಿ ಹೊಕ್ಕನು. ರಾತ್ರಿಯಲ್ಲಿ ಶಾಹಿಸ್ತೇಖಾನನನ್ನು ಕೊಲ್ಲಹೋದನು. ಆದರೆ ಅದೇ ಸಮಯದಲ್ಲಿ ಖಾನನು ಎಚ್ಚತ್ತು ಜಾರಿಕೊಂಡನು. ಅವನ

ಕೈಬೆರಳುಗಳು ಮಾತ್ರ ಶಿವಾಜಿಯ ಖಡ್ಗಕ್ಕೆ ತುತ್ತಾದುವು. ಖಾನನು ಹೆದರಿ ದಿಲ್ಲಿಗೆ ಓಡಿಹೋದನು.

ಬಳಿಕ ಶಿವಾಜಿಯು ಮೊಗಲರ ವಶದಲ್ಲಿದ್ದ ಸುರತನಗರವನ್ನು ಸುಲಿದನು. ಔರಂಗಜೇಬನು ಬಹಳ ಸಿಟ್ಟಾಗಿ, ಜಯಸಿಂಗ ಮತ್ತು ದಿಲೇರಖಾನ ಎಂಬ ಸರದಾರರನ್ನು ಕಳುಹಿದನು. ಅವರು ಶಿವಾಜಿಯ ಬಹಳ ಕೋಟೆಗಳನ್ನು ಗೆದ್ದರು. ಆದುದರಿಂದ ಧೂರ್ತನಾದ ಶಿವಾಜಿಯು ಅವರೊಡನೆ ಒಪ್ಪಂದ ಮಾಡಿಕೊಂಡನು. ಮುಂದೆ ಅವನು ಮೊಗಲ ದರಬಾರಕ್ಕೆ ಭೆಟ್ಟಿ ಕೊಡಲು ಆಗ್ರಾಪಟ್ಟಣಕ್ಕೆ ಹೋಗಬೇಕಾಯಿತು. ಅಲ್ಲಿ ಔರಂಗಜೇಬನು ಶಿವಾಜಿಯನ್ನು ಹಿಡಿದು ಸೆರೆಯಲ್ಲಿಟ್ಟನು. ಆಗ ಶಿವಾಜಿಯು ತಂತ್ರದಿಂದ ಮಿಠಾಯಿಯ ಬುಟ್ಟಿಯಲ್ಲಿ ಕುಳಿತು ಪಾರಾದನು. ಮುಂದೆ ಔರಂಗಜೇಬನೂ ಶಿವಾಜಿಯ ಗೊಡವೆಗೆ ಹೋಗಲಿಲ್ಲ.



ಶಿವಾಜಿಯು ಮಲ್ಲಪ್ಪ ದೇಸಾಯಿಣಿಯನ್ನು ಸನ್ಮಾನಿಸುವನು

ಶಿವಾಜಿಯು ಸಾಕಷ್ಟು ಪ್ರದೇಶವನ್ನು ಕೈವಶಮಾಡಿಕೊಂಡನು. ಭಾಂಡಾರದಲ್ಲಿ ಬೇಕಾದಷ್ಟು ಹಣವೂ ಕೂಡಿತು. ಜನರೆಲ್ಲರ ಪ್ರೀತಿ-ವಿಶ್ವಾಸಗಳನ್ನೂ ಅವನು ಪಡೆದಿದ್ದನು. ಆದುದರಿಂದ ಅವನು ತನ್ನದೇ ಆದ ಒಂದು ರಾಜ್ಯವನ್ನು ಸ್ಥಾಪಿಸಿಬಿಟ್ಟನು. ಕ್ರಿ. ಶ. ೧೬೭೪ರಲ್ಲಿ, ರಾಯಗಡದಲ್ಲಿ "ಛತ್ರಪತಿ" ಎಂಬ ಬಿರುದಿನಿಂದ ಪಟ್ಟಕ್ಕೆ ಕುಳಿತನು. ಅವನು ಆಡಳಿತದ ವ್ಯವಸ್ಥೆಗಾಗಿ ಎಂಟು ಜನ ಮಂತ್ರಿಗಳನ್ನು ನೇಮಿಸಿಕೊಂಡನು ಸ್ವಾಮಿ

ರಾಮದಾಸರು ಶಿವಾಜಿಯ ಗುರುಗಳಾಗಿದ್ದರು. ಶಿವಾಜಿಯ ರಾಜ್ಯದಾಡಳಿತವು ಜನರಿಗೆ ಬಹಳ ಸುಖಕರವಾಗಿತ್ತು.

ಶಿವಾಜಿಯು ಒಮ್ಮೆ ದಕ್ಷಿಣಕ್ಕೆ ದಂಡೆತ್ತಿ ಬಂದಿದ್ದನು. ದಂಡಯಾತ್ರೆಯನ್ನು ಮುಗಿಸಿ ಹಿಂದಿರುಗಿ ಹೋಗುವಾಗ, ಅವನ ಸೈನಿಕರು ಬೆಳವಡಿ ಕೋಟೆಗೆ ಮುತ್ತಿಗೆ ಹಾಕಿದರು. ಆಗ ಬೆಳವಡಿಯಲ್ಲಿ ಈಶಪ್ರಭು ದೇಸಾ-ಯಿಯು ಆಳುತ್ತಿದ್ದನು. ಈ ಮುತ್ತಿಗೆಯಲ್ಲಿ ಈಶಪ್ರಭುವು ಮಡಿದನು. ಕೂಡಲೆ ಅವನ ಹೆಂಡತಿ ಮಲ್ಲವ್ವ ದೇಸಾಯಿಣಿಯು ಮರಾಠರಿಗೆ ಎದುರಾಳಿಯಾಗಿ ನಿಂತು ಕಾದಿದಳು ಕನ್ನಡ ಕೇಸರಿಣಿಯ ಹೊಡೆತಕ್ಕೆ ಮರಾಠರ ದಂಡಿನವರು ಪಟಪಟನೆ ನೆಲಕ್ಕೆ ಬಿದ್ದರು. ಇದನ್ನು ಕೇಳಿ ಶಿವಾಜಿಗೆ ಅಚ್ಚರಿಯಾಯಿತು. ಅದಕ್ಕಾಗಿ ಅವನು ಮತ್ತೆ ಹೆಚ್ಚು ಸೈನಿಕರನ್ನು ಮುಂದೆ ಕಳುಹಿದನು. ಮರಾಠರ ದೊಡ್ಡ ದಂಡಿನೊಡನೆ ಕಾದಾಡುವಾಗ ಮಲ್ಲವ್ವನು ಗಾಯಗೊಂಡು ಸೆರೆಸಿಕ್ಕಳು. ಮರಾಠಾ ಸರದಾರನೊಬ್ಬನು ಆಕೆಯನ್ನು ಶಿವಾಜಿಯ ಮುಂದೆ ಒಯ್ದು ನಿಲ್ಲಿಸಿದನು. ಆಕೆಯ ಶೌರ್ಯ-ಸಾಹಸಗಳಿಗೆ ಮೆಚ್ಚಿ ಶಿವಾಜಿ ಮಹಾರಾಜನು, ಆಕೆಗೆ ಉಡುಗೊರೆಗಳನ್ನು ಕೊಟ್ಟು ಮರ್ಯಾದೆಯಿಂದ ಕಳುಹಿದನು.

ಶಿವಾಜಿಯು ಸಣ್ಣ ಸರದಾರನ ಮಗನಾದರೂ ತನ್ನ ಶಕ್ತಿ-ಸಾಹಸಗಳಿಂದ ಸ್ವತಂತ್ರ ರಾಜನಾದನು. ಅವನು ಬಡ-ಬಗ್ಗರ ಮೇಲೆ ಬಹಳ ಅಂತಃಕರಣ-ವುಳ್ಳವನಾಗಿದ್ದನು. ಹಿಂದುಧರ್ಮವನ್ನು ತುಂಬ ಗೌರವಿಸುತ್ತಿದ್ದನು. ಸ್ತ್ರೀಯ-ರನ್ನು ಮನ್ನಣೆಯಿಂದ ಕಾಣುತ್ತಿದ್ದನು. ಅವನಿಗೆ ಸಂಭಾಜಿ, ರಾಜಾರಾಮ ಎಂಬ ಇಬ್ಬರು ಮಕ್ಕಳಿದ್ದರು. ಕ್ರಿ. ಶ. ೧೬೮೦ರಲ್ಲಿ, ಕಾಲಿಗೆ ಮಂಡೆಯಾಗಿ ಅವನು ಮರಣಹೊಂದಿದನು. ಶಿವಾಜಿಯ ಕೆಚ್ಚೆದೆಯೂ ದೃಢನಿಶ್ಚಯವೂ ಯಾವಾಗಲೂ ನಮ್ಮ ಮನದೆದುರು ಇರಬೇಕು.

## ಅಭ್ಯಾಸನಗಳು

೧. ಶಿವಾಜಿಯ ತಂದೆ-ತಾಯಿಗಳು ಯಾರು?
೨. ಜೀಜಾಬಾಯಿಯು ಶಿವಾಜಿಗೆ ಚಿಕ್ಕಂದಿನಲ್ಲಿ ಎಂತಹ ಶಿಕ್ಷಣವನ್ನು ಕೊಟ್ಟಳು?
೩. ಶಿವಾಜಿಯ ಜೀವದ ಗೆಳೆಯರು ಯಾರು?
೪. ಶಿವಾಜಿಯು ಅಫಝುಲ್‌ಖಾನನನ್ನು ಹೇಗೆ ಕೊಂದನು?
೫. ಶಿವಾಜಿಯು ಶಾಹಿಸ್ತೇಖಾನನನ್ನು ದಿಲ್ಲಿಗೆ ಹೇಗೆ ಓಡಿಸಿದನು?
೬. ಶಿವಾಜಿಯು ಔರಂಗಜೇಬನ ಸೆರೆಯಿಂದ ಹೇಗೆ ಪಾರಾಗಿ ಬಂದನು?
೭. ಶಿವಾಜಿಯು ಬೆಳವಡಿಯ ಮಲ್ಲವ್ವನಿಗೆ ಏಕೆ ಉಡುಗೊರೆಮಾಡಿದನು?
೮. ಶಿವಾಜಿಯ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೩೧. ಹಿರಿಯ ಬಾಜೀರಾಯ

ಶಿವಾಜಿಯ ಮೊಮ್ಮಗ ಶಾಹು ಮಹಾರಾಜನು ಸಾತಾರೆಯಲ್ಲಿ ಆಳುತ್ತಿದ್ದಾಗ, ಬಾಳಾಜಿ ವಿಶ್ವನಾಥ ಭಟ ಎಂಬವನು ಅವನ ಪೇಶವೆಯಾಗಿದ್ದನು. ಪೇಶವೆ ಎಂದರೆ ಮುಖ್ಯಮಂತ್ರಿ.

ಬಾಳಾಜಿ ವಿಶ್ವನಾಥನಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯವನ ಹೆಸರು ಬಾಜೀರಾಯ, ಚಿಕ್ಕವನ ಹೆಸರು ಚಿಮಾಜಿ. ಇವರು ಒಬ್ಬರನ್ನೊಬ್ಬರು ರಾಮ-ಲಕ್ಷ್ಮಣರಂತೆ ಪ್ರೀತಿಸುತ್ತಿದ್ದರು. ಇಬ್ಬರೂ ಕೂಡಿಯೆ ಇರುತ್ತಿದ್ದರು. ಕೂಡಿಯೆ ಓದು-ಬರೆಹ ಕಲಿಯುತ್ತಿದ್ದರು. ಇವರಲ್ಲಿ ಬಾಜೀರಾಯನು ಬಲು ಸುಂದರನಿದ್ದನು, ಬುದ್ಧಿವಂತನೂ ಆಗಿದ್ದನು.



ಯುದ್ಧವೀರ ಬಾಜೀರಾಯ

ಬಾಜೀರಾಯನು ಚಿಕ್ಕಂದಿನಲ್ಲಿಯೆ ಯುದ್ಧವಿದ್ಯೆಗಳನ್ನು ಕಲಿತನು. ಅವನು ನಿತ್ಯವೂ ಬಿಡದೆ ವ್ಯಾಯಾಮ ಮಾಡುತ್ತಿದ್ದನು. ಪ್ರತಿದಿನ ಸಾವಿರದ ವರೆಗೆ ಸಾಮು-ಬೈರಕು ತೆಗೆಯುತ್ತಿದ್ದನು. ಕುದುರೆಯನ್ನು ಹತ್ತುವುದು, ಕುಸ್ತಿ ಆಡುವುದು ಅವನ ಪ್ರೀತಿಯ ವಿಷಯಗಳಾಗಿದ್ದುವು. ಹುರಿಕಟ್ಟಾದ ಶರೀರ, ಮೇಲಾಗಿ ರೂಪವಂತ; ಎಂದಮೇಲೆ ಕೇಳುವುದೇನು! ಅವನನ್ನು ನೋಡಿದವರೆಲ್ಲರೂ ಅವನ ಪ್ರಭಾವಕ್ಕೆ ಒಳಗಾಗುತ್ತಿದ್ದರು. ಅವನು ಮಾತ

ಸಾಹತ್ತಿದರೆ, ಜನರು ನಿಂತು ಕೇಳಿ ಹೋಗುತ್ತಿದ್ದರು. ಬಾಜೀರಾಯನು ಬೆಳೆದು ದೊಡ್ಡವನಾಗಲು ಅವನ ರೂಪ, ಬುದ್ಧಿವಂತಿಕೆ ಹಾಗು ಶೂರತನ ಇವುಗಳ ಕೀರ್ತಿಯು ಸುತ್ತಲೂ ಹಬ್ಬಿತು.

ಬಾಳಾಜಿ ವಿಶ್ವನಾಥನು ತೀರಿಕೊಂಡಾಗ, ಬಾಜೀರಾಯನು ಇಪ್ಪತ್ತೆರಡು ವರುಷದವನಿದ್ದನು. ಶಾಹುಮಹಾರಾಜನು ಮೊದಲಿನಿಂದಲೂ ಅವನನ್ನು ಪ್ರೀತಿಸುತ್ತಿದ್ದನು. ಆದುದರಿಂದಲೇ 'ಚಿಕ್ಕವನಾದರೂ ಪೇಶ್ವೆಪದಕ್ಕೆ ಇವನೇ ಯೋಗ್ಯನು' ಎಂದು, ಅವನು ಬಾಜೀರಾಯನನ್ನು ಪೇಶ್ವೆಯನ್ನಾಗಿ ಮಾಡಿ ಕೊಂಡನು.

ಬಾಜೀರಾಯನು ಪೇಶ್ವೆಯಾದ ಬಳಿಕ ತನ್ನ ಜೀವಮಾನವನ್ನೆಲ್ಲ ಯುದ್ಧಮಾಡುವುದರಲ್ಲಿಯೆ ಕಳೆದನು ಅವನು ಮರಾಠರ ರಾಜ್ಯವನ್ನು ಬೆಳಸಬೇಕೆಂದು ನಿಶ್ಚಯಿಸಿದನು. 'ಮೊದಲು ದಿಲ್ಲಿಯ ಮೊಗಲ ಬಾದ ಶಹನ ಮೇಲೆ ದಾಳಿಮಾಡಬೇಕು, ಅವನನ್ನು ತಮ್ಮ ಅಧೀನಕ್ಕೆ ತೆಗೆದು ಕೊಂಡರೆ ಉಳಿದೆಲ್ಲ ಚಿಕ್ಕ ಚಿಕ್ಕ ರಾಜರು ತಾವಾಗಿಯೇ ಶರಣು ಬರುವರು' ಎಂದು ಅವನು ವಿಚಾರಮಾಡಿದನು. ಆ ಸಂಗತಿಯನ್ನು ಎಲ್ಲ ಮರಾಠಾ ಸರದಾರ ಮಂಡಳದವರಿಗೆ ತಿಳುಹಿದನು. ಅವರಲ್ಲಿ ಕೆಲವರು ವಿರೋಧ ವನ್ನು ತೋರಿಸಿದರು. ಅವರು ಬಾಜೀರಾಯನಿಗೆ ಸಹಾಯವನ್ನು ಮಾಡದೆ, ಅಡ್ಡಿ-ಆತಂಕಗಳನ್ನು ಒಡ್ಡಹತ್ತಿದರು. ಆದುದರಿಂದ ಬಾಜೀರಾಯನು ಕೆಲವರನ್ನು ಹೊರಗೆ ಹಾಕಿದನು, ಮತ್ತು ತನ್ನ ನಂಬುಗೆಯ ಹಾಗು ಸ್ವಾಮಿ ಭಕ್ತ ಶೂರರಿಗೆ ಜಹಗೀರುಗಳನ್ನು ಕೊಟ್ಟು ಅವರ ಸಹಾಯವನ್ನು ಪಡೆದನು.

ಹೈದರಾಬಾದದ ನಿಜಾಮ ಉಲ್ಮುಲ್ಕ ಎಂಬವನು, ಬಾಜೀರಾಯನ ಪ್ರತಿಯೊಂದು ಕಾರ್ಯದಲ್ಲಿಯೂ ತೊಂದರೆಕೊಡುತ್ತಿದ್ದನು. ಬಾಜೀರಾಯನಿಗೆ ಗೊತ್ತಿಲ್ಲದಂತೆಯೆ ಅವನು, ಶಾಹುಮಹಾರಾಜನಿಂದ ಚೌಧಾಯಿ ಹಾಗು ಸರದೇಶಮುಖಿಗಳನ್ನು 'ಸೂಟು' ಬಿಡಿಸಿಕೊಂಡಿದ್ದನು. ಈ ಸಂಗತಿಯು ಬಾಜೀರಾಯನಿಗೆ ತಿಳಿಯಿತು. ಅವನು ನಿಜಾಮನ ಮೇಲೆ ದಂಡೆತ್ತಿ ಹೋದನು. **ಪಾಲಖೇಡ** ಎಂಬಲ್ಲಿ ಇಬ್ಬರ ನಡುವೆ ಯುದ್ಧವಾಯಿತು. ತನಗೆ ಸೋಲುಂಟಾಗುವುದೆಂದು ನಿಶ್ಚಯಿಸಿ ನಿಜಾಮನು, ಬಾಜೀರಾಯನಿಗೆ ಶರಣು ಬಂದನು. ಈ ವಿಜಯದಿಂದ ಬಾಜೀರಾಯನ ಕೀರ್ತಿ ಎಲ್ಲ ಕಡೆಗೂ ಹಬ್ಬಿತು.

ಉತ್ತರಭಾರತದಲ್ಲಿ ಬುಂದೇಲಖಂಡ ಎಂಬ ಹೆಸರಿನದೊಂದು ಪ್ರಾಂತ ವಿದೆ. ಹಿಂದೆ ಅಲ್ಲಿ ಛತ್ರಸಾಲನೆಂಬ ಅರಸನು ರಾಜ್ಯವಾಳುತ್ತಿದ್ದನು. ದಿಲ್ಲಿಯ ಬಾದಶಹನು ಬಂಗಷ ಎಂಬ ತನ್ನ ಸರದಾರನನ್ನು ಅವನ ಮೇಲೆ

ದಂಡೆತ್ತಿ ಕಳುಹಿದನು. ಆಗ ಛತ್ರಸಾಲನು ಬಾಜೀರಾಯನಿಗೆ ಪತ್ರ ಬರೆದು, ಬುಂದೇಲಖಂಡದ ಮರ್ಯಾದೆಯನ್ನು ಉಳುಹಬೇಕೆಂದು ಬೇಡಿಕೊಂಡನು. ಕೂಡಲೆ ಬಾಜೀರಾಯನು ಅವನ ಸಹಾಯಕ್ಕೆ ಹೊರಟನು. ಬಾಜೀ-ರಾಯನು ಒರುವ ಸುದ್ದಿಯನ್ನು ಕೇಳಿ ಬಂಗಷನು ಹೆದರಿದನು. ಇಬ್ಬರ ನಡುವೆ ಘನಘೋರ ಯುದ್ಧವಾಯಿತು ಈ ಯುದ್ಧದಲ್ಲಿ ಬಂಗಷನು ಸೋತು ಓಡಿಹೋದನು. ಮುಪ್ಪಿನವನಾದ ಛತ್ರಸಾಲನಿಗೆ ಈ ಜಯದ ಸುದ್ದಿಯನ್ನು ಕೇಳಿ ಆನಂದವಾಯಿತು. ಅವನು ತನ್ನ ರಾಜ್ಯದಲ್ಲಿಯ ಒಂದು ಭಾಗವನ್ನು ಬಾಜೀರಾಯನಿಗೆ ಕೊಟ್ಟನು.

ಬಳಿಕ ಬಾಜೀರಾಯನು ಮಾಳವಾ ಪ್ರಾಂತದ ಮೇಲೆ ದಾಳಿಯನ್ನು ಮಾಡಿದನು. ಅದು ಒಳ್ಳೆಯ ಬೆಳೆಯುಳ್ಳ ಪ್ರಾಂತವಾಗಿತ್ತು. ಅಲ್ಲಿ ರಾಜಾ ಗಿರಿಧರ ಎಂಬವನು ಮೊಗಲರ ಸುಭೇದಾರನಾಗಿ ಆಳುತ್ತಿದ್ದನು. ಬಾಜೀ ರಾಯನು ಅವನನ್ನು ಸೋಲಿಸಿ, ಮಾಳವ ಪ್ರಾಂತವನ್ನು ವಶಪಡಿಸಿಕೊಂಡನು. ಈ ಯುದ್ಧದಲ್ಲಿ ರಾಣೋಜಿ ಸಿಂದೆಯು ಪರಾಕ್ರಮವನ್ನು ತೋರಿಸಿದ್ದರಿಂದ, ಅವನಿಗೆ ಗ್ವಾಲೇರವು ಜಹಗೀರಾಗಿ ದೊರೆಯಿತು. ಮಲ್ಹಾರರಾವ ಹೋಳ ಕರ ಎಂಬ ಸರದಾರನಿಗೆ ಇಂದೂರು ಜಹಗೀರಾಗಿ ಸಿಕ್ಕಿತು, ಉದಾಜಿ ಪವಾರನಿಗೂ ಮಾಳವದಲ್ಲಿ ಒಂದು ಚಿಕ್ಕ ಜಹಗೀರು ದೊರೆಯಿತು. ಮುಂದೆ ಬಾಜೀರಾಯನು ದಿಲ್ಲಿಯ ಮೇಲೆ ದಂಡೆತ್ತಿ ಹೋದನು. ಆಗ ದಿಲ್ಲಿಯ ಬಾದಶಹನು ಮಾಳವ ಪ್ರಾಂತದ ಸುಭೇದಾರಿಕೆಯನ್ನು ಮರಾಠರಿಗೆ ಕೊಟ್ಟನು.

ಮುಂದೆ ಕೆಲವು ಕಾಲದಮೇಲೆ ನಿಜಾಮ ಉಲ್ಮುಲ್ಕನು ಮೊಗಲ ಬಾದ ಶಹನ ಮನವೊಲಿಸಿ, ಮಾಳವದ ಸುಭೇದಾರಿಕೆಯನ್ನು ತನ್ನ ಮಗನಿಗೆ ಕೊಡಿಸಿದನು. ಇದು ಗೊತ್ತಾಗುತ್ತಲೇ ಬಾಜೀರಾಯನು ನಿಜಾಮನ ಮೇಲೆ ದಂಡೆತ್ತಿಹೋದನು. ಭೋಪಾಳದ ಬಳಿ ಇಬ್ಬರಿಗೂ ಯುದ್ಧವಾಯಿತು. ನಿಜಾಮನು ಸೋತು ಒಪ್ಪಂದ ಮಾಡಿಕೊಂಡನು.

ಕ್ರಿ. ಶ. ೧೭೩೯ರಲ್ಲಿ ಇರಾಣದೇಶದ ಅರಸನಾಗಿದ್ದ ನಾದಿರಶಹನು ದಿಲ್ಲಿಯ ಮೇಲೆ ದಂಡೆತ್ತಿ ಬಂದನು. ಅವನು ಅನೇಕ ಜನರನ್ನು ಕೊಂದ ನಲ್ಲದೆ, ಎಷ್ಟೋ ಸಂಪತ್ತನ್ನು ಸುಲಿಗೆ ಮಾಡಿದನು. ಅವನು ದಕ್ಷಿಣಕ್ಕೆ ಬರುವನೆಂಬ ಸುದ್ದಿಯನ್ನು ಕೇಳಿ, ಬಾಜೀರಾಯನು ದೊಡ್ಡ ದಂಡಿನೊಡನೆ ನಾದಿರಶಹನ ಮೇಲೆ ಹೊರಟನು. ಈ ಸಂಗತಿಯನ್ನು ಕೇಳಿ ನಾದಿರಶಹನು ಭಾರತವನ್ನು ಬಿಟ್ಟು ಓಡಿಹೋದನು. ಮರಳಿ ಪುಣೆಗೆ ಬರುತ್ತಿರುವಾಗ ದಾರಿಯಲ್ಲಿ ಬಾಜೀರಾಯನು ಬೇನೆಬಿದ್ದನು. ಮುಂದೆ ನರ್ಮದಾ ನದಿಯ

ದಂಡೆಯ ಮೇಲೆ ಇರುವ ರಾವೇರ ಎಂಬ ಊರಲ್ಲಿ ಅವನು ಮರಣ ಹೊಂದಿದನು (೧೭೪೦).

ಬಾಜೀರಾಯನು ಸುಮಾರು ಇಪ್ಪತ್ತು ವರುಷಗಳ ವರೆಗೆ ಪೇಶ್ವೆಯ ಕೆಲಸಮಾಡಿದನು. ಆ ಕಾಲದಲ್ಲಿ ಮರಾಠರ ಹೆಸರು ಇಡೀ ಭಾರತದ ತುಂಬ ಹಬ್ಬಿತ್ತು. ಅವನು ಎಷ್ಟೋ ಯುದ್ಧಗಳನ್ನು ಮಾಡಿದನು. ಒಂದರಲ್ಲಿಯೂ ಅವನಿಗೆ ಸೋಲು ಉಂಟಾಗಲಿಲ್ಲ. ಇದರಿಂದ ಬಾಜೀರಾಯನ ಕೀರ್ತಿಯು ಭಾರತದ ಇತಿಹಾಸದಲ್ಲಿ ಚಿರಕಾಲ ಉಳಿಯುವಂತಾಯಿತು.

## ಅಭ್ಯಾಸನಗಳು

೧. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ಬಾಜೀರಾಯನು. . . . . .ನ ಮಗನು.

(ಬ) ಬಾಜೀರಾಯನಿಗೆ. . . . . ಎಂಬ ತಮ್ಮನಿದ್ದನು.

(ಕ) ಇವನು ಪೇಶ್ವೆಯಾದಾಗ . . . . ವರುಷದವನಿದ್ದನು.

(ಡ) ಇವನು ಉತ್ತರಭಾರತದಲ್ಲಿ . . . . . ಅರಸನಾದ . . . . ನಿಗೆ ಸಹಾಯ ಮಾಡಿ . . . .ನನ್ನು ಸೋಲಿಸಿ, ಓಡಿಸಿದನು.

(ಕ) ಬಾಜೀರಾಯನು . . ಎಂಬಲ್ಲಿ ಕ್ರಿ. ಶ. . . . . .ರಲ್ಲಿ ಮರಣಹೊಂದಿದನು.

೨. ಬಾಜೀರಾಯನು ಚಿಕ್ಕಂದಿನಲ್ಲಿ ಶಾಹುರಾಜನ ಪ್ರೀತಿಗೆ ಏಕೆ ಪಾತ್ರನಾಗಿದ್ದನು?

೩. ಬಾಜೀರಾಯನು ನಿಜಾಮನ ಕೂಡ ಯುದ್ಧವನ್ನು ಏಕೆ ಮಾಡಿದನು?

೪. ನಾದಿರಶಹನು ಯಾರು? ಅವನು ಭಾರತವನ್ನು ಬಿಟ್ಟು ಏಕೆ ಓಡಿಹೋದನು?

# ೩೨. ಮಹಾರಾಣಿ ತಾರಾಬಾಯಿ

ಶಿವಾಜಿಯ ತರುವಾಯ ಸಂಭಾಜಿಯು ಅರಸನಾದನು. ಔರಂಗಜೇಬನು ಸಂಭಾಜಿಯನ್ನು ಹಿಡಿದು ಕೊಲ್ಲಿಸಿದನು, ಅವನ ಹೆಂಡತಿಯನ್ನೂ ಮಗನಾದ ಶಾಹುವನ್ನೂ ದಿಲ್ಲಿಯಲ್ಲಿ ಕೈಸೆರೆಯಲ್ಲಿ ಇಟ್ಟನು. ರಾಯಗಡವು ಮೊಗಲರ ವಶವಾಯಿತು. ಇಂತಹ ಕಾಲದಲ್ಲಿ, ಬಂದ ಸಂಕಟವನ್ನು ದೂರ ಮಾಡಿ ಮರಾಠರ ರಾಜ್ಯವನ್ನು ಉಳಿಸಿದ ಕೀರ್ತಿಯು ಮಹಾರಾಣಿ ತಾರಾಬಾಯಿಗೆ ಸಲ್ಲುವುದು.



ಮೊಗಲರನ್ನು ಎದುರಿಸಿದ ರಾಣಿ ತಾರಾಬಾಯಿ

ತಾರಾಬಾಯಿಯು ಶಿವಾಜಿಯ ೨ನೆಯ ಮಗನಾದ ರಾಜಾರಾಮನ ಹೆಂಡತಿಯು. ಸಂಭಾಜಿಯ ಮರಣದ ತರುವಾಯ ರಾಜಾರಾಮನು ಪಟ್ಟಕ್ಕೆ ಕುಳಿತನು. ಔರಂಗಜೇಬನು ಮರಾಠರ ರಾಜ್ಯವನ್ನು ಸಂಪೂರ್ಣ ನಾಶಮಾಡಬೇಕೆಂದು ಮೇಲಿಂದ ಮೇಲೆ ದಕ್ಷಿಣಕ್ಕೆ ದಂಡೆತ್ತಿ ಬರಹತ್ತಿದನು. ಆಗ ರಾಜಾರಾಮನಿಗೆ ಇವನ ದಂಡಿನ ಮುಂದೆ ನಿಲ್ಲಲು ಸಾಧ್ಯವಾಗಲಿಲ್ಲ. ಆದರೆ ಮೊಗಲ ಸೈನ್ಯವು ಒಂದು ಕೋಟೆಯನ್ನು ವಶಪಡಿಸಿಕೊಂಡು ಮತ್ತೊಂದು ಕೋಟೆಗೆ ಹೋಯಿತೆಂದರೆ, ಮರಾಠರ ದಂಡಿನವರೆಲ್ಲ ಕೂಡಿಕೊಂಡು ಆ ಹಿಂದಿನ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ತಿರುಗಿ ವಶಪಡಿಸಿಕೊಳ್ಳುತ್ತಿ

ದ್ದರು ಔರಂಗಜೇಬನು ಮುಂದೆ ಮುಂದೆ, ರಾಜಾರಾಮನ ಸೈನ್ಯ ಹಿಂದೆ ಹಿಂದೆ—ಹೀಗೆ ನಡೆದಿತ್ತು. ರಾಜಾರಾಮನು ಹೋದ ಕಡೆಗಳಲ್ಲೆಲ್ಲ ತಾರಾಬಾಯಿ ಕುದುರೆಹತ್ತಿ ಅವನನ್ನು ಹಿಂಬಾಲಿಸುತ್ತಿದ್ದಳು, ಅವನಿಗೆ ಹುರುಪು ಕೊಡುತ್ತಿದ್ದಳು. ಎಷ್ಟು ಪ್ರಯತ್ನಪಟ್ಟರೂ ಮರಾಠರು ಔರಂಗಜೇಬನಿಗೆ ಮಣಿಯಲಿಲ್ಲ.

ಹೀಗೆ ಮುತ್ತಿಗೆಗಳ ಮೇಲೆ ಮುತ್ತಿಗೆಗಳು ನಡೆದಾಗಲೇ ರಾಜಾರಾಮನು ಮರಣಹೊಂದಿದನು. ಆದರೂ ಶೂರಳಾದ ತಾರಾಬಾಯಿಯು ಧೈರ್ಯವನ್ನು ಕಳೆದುಕೊಳ್ಳಲಿಲ್ಲ. ಕೆಲವು ಸರದಾರರ ಸಹಾಯದಿಂದ ತನ್ನ ೧೦ ವರುಷದ ಮಗನಾದ ಶಿವಾಜಿಯನ್ನು ಸಾತಾರೆಯಲ್ಲಿ ಪಟ್ಟಕ್ಕೆ ಕುಳ್ಳಿರಿಸಿ, ತಾನೇ ರಾಜ್ಯ ಕಾರಭಾರ ಮಾಡಹತ್ತಿದಳು; ಅಲ್ಲದೆ ಮರಾಠರ ದಂಡು ಕಟ್ಟಿಕೊಂಡು, ಮೊಗಲರ ಕೂಡ ಎಡೆಬಿಡದೆ ಹೋರಾಡ ತೊಡಗಿದಳು ತಾರಾಬಾಯಿಯು ಮೊಗಲರ ದಂಡಿನವರಿಗೆ ರಣಚಂಡಿಯಂತೆ ಕಾಣುತ್ತಿದ್ದಳು. ಅವಳ ಮುಂದೆ ಔರಂಗಜೇಬನ ದಂಡಿನವರ ಆಟವು ನಡೆಯಲಿಲ್ಲ. ಅದಕ್ಕಾಗಿ ಅವರು ಮರಾಠರ ಗೊಡವೆಯನ್ನು ಬಿಟ್ಟುಬಿಟ್ಟರು. ಮರಾಠರ ರಾಜ್ಯದ ಮೇಲೆ ಬಂದ ವಿಪತ್ತು ಮಹಾರಾಣಿ ತಾರಾಬಾಯಿಯ ಶೌರ್ಯದಿಂದ ದೂರವಾಯಿತು.

ಮುಂದೆ ಔರಂಗಜೇಬನ ಮರಣಾನಂತರ, ದಿಲ್ಲಿಯ ಪಟ್ಟದ ಸಲುವಾಗಿ ಜಗಳವೆದ್ದಿತು. ಆ ಜಗಳದಲ್ಲಿ ಅನಾಯಾಸವಾಗಿ—ದಿಲ್ಲಿಯ ಸೆರೆಮನೆಯಲ್ಲಿದ್ದ ಶಾಹುರಾಜನ ಬಿಡುಗಡೆಯಾಯಿತು. ತಮ್ಮ ಅರಸನ ಬಿಡುಗಡೆಯ ಸುದ್ದಿಯನ್ನು ಕೇಳಿ ಮರಾಠರ ಸರದಾರರಿಗೆಲ್ಲ ಆನಂದವಾಯಿತು. ಅವರಲ್ಲಿ ಕೆಲವರು ಹೋಗಿ ಶಾಹುವನ್ನು ಕೂಡಿಕೊಂಡರು. ಶಾಹುವು ತನ್ನ ರಾಜ್ಯದಲ್ಲಿ ಕಾಲಿಡುತ್ತಲೆ, ತಾರಾಬಾಯಿಗೆ ಒಂದು ಪತ್ರಬರೆದು ತನ್ನ ರಾಜ್ಯವನ್ನು ತನಗೆ ಬಿಡಬೇಕೆಂದು ಕೇಳಿಕೊಂಡನು. ಅದಕ್ಕೆ ತಾರಾಬಾಯಿಯು "ಈ ರಾಜ್ಯವನ್ನು ನನ್ನ ಗಂಡ ಗಳಿಸಿದ್ದಾನೆ, ಇದಕ್ಕೆ ನನ್ನ ಮಗನೇ ಹಕ್ಕುದಾರನು" ಎಂದು ಹೇಳಿ ಕಳುಹಿದಳು.

ಇದರಿಂದ ಶಾಹುವಿಗೆ ಬಹಳ ಕೆಡುಕೆನಿಸಿತು. ಅವನು ಧನಾಜಿ ಜಾಧವ ಖಂಡೋಬಲ್ಲಾಳ ಹಾಗೂ ಬಾಳಾಜಿ ವಿಶ್ವನಾಥ ಮುಂತಾದ ವೀರರನ್ನು ಕೂಡಿಕೊಂಡು ತಾರಾಬಾಯಿಯ ಮೇಲೆ ಸಾಗಿ ಹೋದನು. ಆಗ ತಾರಾಬಾಯಿಯು ಹೆದರಲಿಲ್ಲ. ಕೆಲವು ಸರದಾರರನ್ನು ಕಟ್ಟಿಕೊಂಡು ಅವನೊಡನೆ ಯುದ್ಧಕ್ಕೆ ನಿಂತಳು. ಆದರೆ ಶಾಹುವಿನ ಪಕ್ಷದ ಸ್ವಾಮಿನಿಷ್ಠ ಮರಾಠಾ ಸರದಾರರ ಮುಂದೆ ಅವಳ ಆಟವು ಸಾಗಲಿಲ್ಲ. ಶಾಹುವು ಗೆದ್ದು ಸಾತಾರೆಯನ್ನು ವಶಪಡಿಸಿಕೊಂಡು ಅರಸನಾದನು. ತಾರಾಬಾಯಿಯು ಪರಶುರಾಮ

ತ್ರಿಂಬಕ, ರಾಮಚಂದ್ರ ಪಂತ ಮೊದಲಾದ ಸರದಾರರನ್ನು ಕೂಡಿಕೊಂಡು ಪನ್ಹಾಳಗಡಕ್ಕೆ ಹೋದಳು. ಅಲ್ಲಿ ನಿಂತುಕೊಂಡು ತನ್ನ ಪಕ್ಷದ ಸೈನ್ಯವನ್ನು ಸಂಘಟಿಸಿದಳು. ತಮ್ಮತಮ್ಮೊಳಗೆ ಜಗಳವಾಡುವುದು ಒಳಿತಲ್ಲವೆಂದು ಶಾಹು ಮಹಾರಾಜನು ತಾರಾಬಾಯಿಯ ಗೊಡವೆಗೆ ಹೋಗಲಿಲ್ಲ.

ಬಳಿಕ ತಾರಾಬಾಯಿಯು ತನ್ನ ನಂಬಿಗೆಯ ಸರದಾರರೊಂದಿಗೆ ಕೊಲ್ಹಾಪುರಕ್ಕೆ ಬಂದಳು. ಅಲ್ಲಿ ತನ್ನ ಮಗನಾದ ಶಿವಾಜಿಯನ್ನು ಪಟ್ಟಕ್ಕೆ ಕುಳ್ಳಿರಿಸಿ ಹೊಸದೊಂದು ರಾಜ್ಯವನ್ನು ಸ್ಥಾಪಿಸಿದಳು. ಸುತ್ತುಮುತ್ತಲಿನ ಪ್ರದೇಶಗಳನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡಳು. ಅಂದಿನಿಂದ ಮರಾಠಾ ರಾಜ್ಯದಲ್ಲಿ ಎರಡು ರಾಜ್ಯಗಳಾದುವು. ಮುಂದೆ ಕ್ರಿ. ಶ. ೧೮೧೮ರಲ್ಲಿ ಸಾತಾರೆಯ ರಾಜ್ಯವು ಅಳಿಗಾಲಾಗಿ ಹೋಯಿತು; ಆದರೂ ಮಹಾರಾಣಿ ತಾರಾಬಾಯಿಯು ಸ್ಥಾಪಿಸಿದ ಕೊಲ್ಹಾಪೂರ ರಾಜ್ಯವು, ಕ್ರಿ. ಶ. ೧೯೪೮ರ ವರೆಗೆ ಬಾಳಿತು.

ಶಾಹುವು ಔರಂಗಜೇಬನ ರಾಜರೀವಿಯಲ್ಲಿ ಬೆಳೆದವನಾದ ಕಾರಣ ವಿಲಾಸಿಯಾಗಿದ್ದನು. ರಾಜಕಾರ್ಯದ ಭಾರವನ್ನು ಹೊರುವುದು ಬೇಡವೆನಿಸಿತು. ಅವನು ಬಾಳಾಜಿ ವಿಶ್ವನಾಥನನ್ನು ಮುಖ್ಯಮಂತ್ರಿ (ಪೇಶವೆ)ಯನ್ನಾಗಿ ನೇಮಿಸಿಕೊಂಡು, ಅವನಿಗೆ ಎಲ್ಲ ಕಾರಭಾರವನ್ನು ಒಪ್ಪಿಸಿದನು. ಬಾಳಾಜಿಯ ತರುವಾಯ ಅವನ ಮಗ ಬಾಜೀರಾಯನು ಪೇಶವೆಯಾದನು. ಇವರಿಬ್ಬರೂ ಮಹಾಶೂರರೂ ರಾಜಕಾರಣನಿಪುಣರೂ ಇದ್ದರು. ಇದರಿಂದ ಪೇಶವೆಯರ ಪ್ರತಿಷ್ಠೆಯೇ ಹೆಚ್ಚಾಯಿತು. ಶಾಹುವು ಕೇವಲ ಹೆಸರಿಗೆ ರಾಜನಾದನು. ಬಾಜೀರಾಯನ ತರುವಾಯ, ಅವನ ಹದಿನೆಂಟು ವರುಷದ ಮಗ ನಾನಾ-ಸಾಹೇಬನು ಪೇಶವೆಯಾದನು. ಈ ಸಂಗತಿಯು ತಾರಾಬಾಯಿಯ ಮನ-ಸ್ಸಿಗೆ ಬರಲಿಲ್ಲ. ಅವಳು ಹೇಗಾದರೂ ಮಾಡಿ ಈ ಪೇಶ್ವೆಯರ ಆಳಿಕೆಯನ್ನು ನಿಲ್ಲಿಸಬೇಕೆಂದು ಪ್ರಯತ್ನ ಮಾಡುತ್ತಲೆ ಇದ್ದಳು. ಶಾಹುರಾಜನ ಮರಣದ ತರುವಾಯ ಅವಳು ಸಾತಾರೆಯನ್ನು ವಶಪಡಿಸಿಕೊಳ್ಳಬೇಕೆಂದು ಪ್ರಯತ್ನಿ-ಸಿದಳು; ಆದರೆ ಆಕೆಗೆ ಯಶ ದೊರೆಯಲಿಲ್ಲ.

ಹೀಗೆ ಮಹಾರಾಣಿ ತಾರಾಬಾಯಿಯು ಸಂಕಟಸಮಯದಲ್ಲಿ ಮರಾಠಾ ರಾಜ್ಯವನ್ನು ಉಳಿಸಿ ಸ್ವತಃ ಆಳಿದಳು. ಹೊಸದಾಗಿ ಕೊಲ್ಹಾಪುರದಲ್ಲಿ ರಾಜ್ಯ ಸ್ಥಾಪಿಸಿದಳು. ಸಾತಾರೆಯ ರಾಜ್ಯವೂ ಪೇಶವೆಯರ ಆಳಿಕೆಯೂ ಕ್ರಿ. ಶ. ೧೮೧೮ರಲ್ಲಿ ಹಾಳಾದುವು. ಆದರೆ ಕೊಲ್ಹಾಪುರದ ರಾಜ್ಯವು ಕ್ರಿ. ಶ. ೧೯೪೮ರ ವರೆಗೆ ಉಳಿದು ಬಾಳಿತು. ಮಹಾರಾಣಿ ತಾರಾಬಾಯಿಯು ೮೬ ವರ್ಷದ ಮುಪ್ಪಿನವಳಾಗಿ, ಕ್ರಿ. ಶ. ೧೭೬೧ರಲ್ಲಿ ಮರಣಹೊಂದಿದಳು.

### ಅಭ್ಯಸನಗಳು

೧. ಕೆಳಗೆ ಕಂಸಗಳಲ್ಲಿ ಕೊಟ್ಟ ಯೋಗ್ಯ ಶಬ್ದಗಳನ್ನು ಇಟ್ಟುಕೊಂಡು ವಾಕ್ಯಗಳನ್ನು ಪೂರ್ತಿ ಮಾಡಿರಿ.

ಅ) ಸಂಭಾಜಿಯನ್ನು (ರಾಜಾರಾಮ, ಔರಂಗಜೇಬ, ಶಿವಾಜಿ) ಕೊಲ್ಲಿಸಿದನು.

ಆ) ತಾರಾಬಾಯಿಯು (ರಾಜಾರಾಮನನ್ನು, ಶಾಹುವನ್ನು, ಶಿವಾಜಿಯನ್ನು) ಪಟ್ಟಕ್ಕೆ ಕೂಡಿಸಿ, ತಾನೇ ರಾಜ್ಯಕಾರಭಾರ ಮಾಡಹತ್ತಿದಳು.

ಇ) ತಾರಾಬಾಯಿಯು (ಸಾತಾರೆಯಲ್ಲಿ, ಕೊಲ್ಹಾಪುರದಲ್ಲಿ, ಪುಣೆಯಲ್ಲಿ) ಹೊಸದಾಗಿ ರಾಜ್ಯ ಸ್ಥಾಪಿಸಿದಳು.

ಈ) ಶಾಹುವು (ಧನಾಜಿಯನ್ನು, ಬಾಳಾಜಿ ವಿಶ್ವನಾಥನನ್ನು, ಖಂಡೋಬಲ್ಲಾಳನನ್ನು) ಪೇಶ್ವೆಯನ್ನಾಗಿ ಮಾಡಿಕೊಂಡನು.

೨. ತಾರಾಬಾಯಿಯು ಮೊಗಲರಿಂದ ಮರಾಠಾರಾಜ್ಯವನ್ನು ಹೇಗೆ ರಕ್ಷಿಸಿದಳು?

೩. ಶಾಹುವು ತಾರಾಬಾಯಿಯ ಕೂಡ ಏಕ ಯುದ್ಧ ಮಾಡಬೇಕಾಯಿತು?

೪. ಪೇಶ್ವೆಯವರ ಆಳಿಕೆಯನ್ನು ನಷ್ಟ ಮಾಡಬೇಕೆಂದು ತಾರಾಬಾಯಿಯು ಯಾವ ಪ್ರಯತ್ನಗಳನ್ನು ಮಾಡಿದಳು?

---

## ೩೩. ಮಹದಾಜಿ ಸಿಂಧೆ

ಮರಾಠಾ ರಾಜ್ಯದಲ್ಲಿ 'ಮೂರುವರೆ ಜಾಣರು' ಎಂದು ಹೆಸರಾದವರಲ್ಲಿ ಮಹದಾಜಿ ಸಿಂಧೆಯೂ ಒಬ್ಬನು. ಆತನು ಮರಾಠಾ ರಾಜ್ಯವನ್ನು ಬೆಳೆಸಿ ಬಲಪಡಿಸುವುದರಲ್ಲಿ ತನ್ನ ಆಯುಷ್ಯವನ್ನು ಕಳೆದನು. ಆದುದರಿಂದ ಅವನು 'ಮರಾಠಾ ರಾಜ್ಯದ ಆಧಾರಸ್ತಂಭ' ಎಂದು ಹೆಸರನ್ನು ಪಡೆದಿದ್ದಾನೆ.

ಮಹದಾಜಿಯು ರಾಣೋಜಿ ಸಿಂಧೆಯ ಮಗನು. ಅವನ ತಾಯಿಯ ಹೆಸರು ಚಿಮಾಬಾಯಿ. ಮಹದಾಜಿಯು ಕ್ರಿ. ಶ. ೧೭೩೦ರಲ್ಲಿ ಹುಟ್ಟಿದನು. ಅವನು ಚಿಕ್ಕಂದಿನಲ್ಲಿ ಬಲು ಆಟಗುಳಿಯಾಗಿದ್ದನು. ಓದು-ಬರೆಹಗಳು ಅವನಿಗೆ ಅಷ್ಟು ಸೇರುತ್ತಿರಲಿಲ್ಲ. ಕುದುರೆ ಹತ್ತುವುದು, ಕತ್ತಿ ತಿರುವುವುದು, ದಾಂಡಪಟ್ಟಿ ಆಡುವುದು, ಬಾಣ-ಬರ್ಚಿಗಳನ್ನು ಉಪಯೋಗಿಸುವುದು ಮುಂತಾದ ಯುದ್ಧವಿದ್ಯೆಗಳಲ್ಲಿಯೆ ಅವನ ಪ್ರೀತಿ ಹೆಚ್ಚು. ಜಗಳಾಟ-ಬಡಿದಾಟಗಳೆಂದರೆ ಮಹದಾಜಿಯ ಮೈ ಉಬ್ಬುತ್ತಿತ್ತು. ಅವನಲ್ಲಿ ಧೈರ್ಯವು ಬಹಳವಿತ್ತು. ಆದುದರಿಂದ ವಯಸ್ಸಿಗೆ ಬಂದಂತೆಲ್ಲ ಅವನು ಒಳ್ಳೆಯ ಯುದ್ಧವೀರನಾದನು.

ಕ್ರಿ. ಶ. ೧೭೬೧ರಲ್ಲಿ ಮರಾಠರಿಗೂ, ಅಹಮ್ಮದಶಹ ಅಬ್ದಾಲಿಗೂ ಪಾನಿ-

ಪತ್ತದ ಬಳಿ ದೊಡ್ಡ ಯುದ್ಧವಾಯಿತು. ಆಗ ಮಹದಾಜಿಯು ಅಬ್ದಾಲಿಯ ಸೈನಿಕರ ಕೂಡ ಶೂರತನದಿಂದ ಕಾದುತ್ತಿದ್ದನು. ಆ ಯುದ್ಧದಲ್ಲಿ ಮರಾಠರಿಗೆ ದುರ್ದೈವದಿಂದ ಅಪಜಯವಾಯಿತು. ಸೋತುಹೋದ ಮರಾಠರ ದಂಡಿನವರು ರಣಾಂಗಣದಿಂದ ಓಡತೊಡಗಿದರು. ಆದರೆ ಮಹದಾಜಿಯು ಮಾತ್ರ ತನ್ನ ಸೈನಿಕರೊಡನೆ ಹಾಗೆಯೆ ಕಾದುತ್ತಲಿದ್ದನು. ಕೊನೆಗೆ ಮಹದಾಜಿಯೂ ಓಡಬೇಕಾಯಿತು. ವೈರಿಗಳು ಅವನ ಬೆನ್ನು ಹತ್ತಿದರು. ತುಸು ದೂರ ಹೋಗು



ಮಹದಾಜಿ ಸಿಂಧೆ

ವಷ್ಟರಲ್ಲಿಯೆ ಒಂದು ತುಂಬಿ ಹರಿಯುವ ಹೊಳೆಯು ಹತ್ತಿತು. ಮಹದಾಜಿಯು ಅದರಲ್ಲಿ ಧುಮುಕಿ ಈಸಹತ್ತಿದನು. ವೈರಿಗಳು ಅಲ್ಲಿಯೂ ಅವನನ್ನು ಬಿಡಲಿಲ್ಲ. ಆ ಹೋರಾಟದಲ್ಲಿ ಒಬ್ಬ ಪಠಾಣನ ಬಲವಾದ ಕತ್ತಿಯ ಏಟಿನಿಂದ ಅವನ ಕಾಲಿಗೆ ಬಹಳ ಪೆಟ್ಟು ಹತ್ತಿತು. ನದಿಯನ್ನು ಈಸಿ ಪಾರಾದನು. ಆದರೆ ಮುಂದೆ ಅವನಿಗೆ ಸರಿಯಾಗಿ ನಡೆಯಲು ಬರಲಿಲ್ಲ; ಹಾಗೆಯೆ ಕುಂಟುತ್ತ ನಡೆದಿದ್ದನು. ಆಗ ಅವನ ಸೈನಿಕನೊಬ್ಬನು ಅವನನ್ನು ಗುರುತಿಸಿದನು. ತನ್ನ ಯಜಮಾನನಿಗೆ ಸಹಾಯಮಾಡುವುದು ಕರ್ತವ್ಯವೆಂದು ಭಾವಿಸಿ, ಅವನನ್ನು ವೈರಿಗಳಿಂದ ಪಾರುಮಾಡಿದನು. ಬಳಿಕ ಮಹದಾಜಿಯು ಸುರಕ್ಷಿತವಾಗಿ ತನ್ನ ಊರಿಗೆ ಬಂದುಮುಟ್ಟಿದನು. ತನಗೆ ಸಂಕಟಕಾಲದಲ್ಲಿ ಸಹಾಯಮಾಡಿದ ಆ ಸೈನಿಕನಿಗೆ ಮಹದಾಜಿಯು ಒಂದು ಊರನ್ನು ಉಂಬಳಿಯಾಗಿ ಕೊಟ್ಟನು.

